# ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು :
ರಾಜಶ್ರೀ ಗುರುಲಿಂಗಪ್ಪಾ ಹುಬ್ಬಳ್ಳಿ
ಬಿ.ಎನ್.ಕೆ.ಸಂ.ಪ.ಪೂ. ಮಹಾವಿದ್ಯಾಲಯ,
ಮುಗಳಖೋಡ. ತಾ।। ರಾಯಬಾಗ

ಮಾರ್ಗದರ್ಶಕರು :
ಡಾ. ಆರ್. ಬಿ. ಚಿಲಮಿ
ಪ್ರಾಧ್ಯಾಪಕರು,
ಶ್ರೀ ಬಿ. ಆರ್. ದರೂರ ಶಿಕ್ಷಣ ಸಂಸ್ಥೆ ಸಂಶೋಧನಾ ಕೇಂದ್ರ,
ಹಾರೂಗೇರಿ. ಜಿಲ್ಲಾ।। ಬೆಳಗಾವಿ



ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ಹಂಪಿ
೨೦೦೮

# ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು :
ರಾಜಶ್ರೀ ಗುರುಲಿಂಗಪ್ಪಾ ಹುಬ್ಬಳ್ಳಿ
ಜಿ.ಎನ್.ಕೆ.ಸಂ.ಪ.ಪೂ. ಮಹಾವಿದ್ಯಾಲಯ,
ಮುಗಳಖೋಡ. ತಾ॥ ರಾಯಬಾಗ






ಮಾರ್ಗದರ್ಶಕರು :
ಡಾ. ಆರ್. ಜಿ. ಜಿಲಜಿ
ಪ್ರಾಧ್ಯಾಪಕರು,
ಶ್ರೀ ಜಿ. ಆರ್. ದರೂರ ಶಿಕ್ಷಣ ಸಂಸ್ಥೆ ಸಂಶೋಧನಾ ಕೇಂದ್ರ,
ಹಾರೂಗೇರಿ. ಜಿಲ್ಲಾ॥ ಬೆಳಗಾವಿ




ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೯

# ಪ್ರಮಾಣ ಪತ್ರ

ಸುಲಗಾಳಿಯವರ ಹಾಸ್ಯ ಪ್ರಬಂಧಗಳು ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಆರ್. ಬಿ. ಚಿಲಮಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೦-೦೯-೨೦೦೯

**ಕು. ರಾಜಶ್ರೀ ಜಿ. ಹುಬ್ಬಳ್ಳಿ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

ಕು. ರಾಜಶ್ರೀ ಬಿ. ಹುಬ್ಬಳ್ಳಿ ಇವರು **ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೧-೦೯-೨೦೦೯

**ಡಾ. ಆರ್. ಬಿ. ಚಿಲಮಿ**
**ಪ್ರಾಧ್ಯಾಪಕರು,**
**ಶ್ರೀ ವ್ಯ. ಶಿಕ್ಷಣ ಸಂಸ್ಥೆ,**
**ಹಾರೂಗೇರಿ.**

# ಅರಿಕೆ

ಮುಗಳಖೋಡ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕಿಯಾಗಿ ನಾನು ಸಂಶೋಧನೆ ಕ್ಷೇತ್ರಕ್ಕೆ ಅವಕಾಶ ಸಿಕ್ಕಾಗ ಪಾದಾರ್ಪಣೆ ಮಾಡಬೇಕು ಅನ್ನುವ ಹವಣಿಕೆ ಯಾವಾಗಲೂ ಇತ್ತು. ಆದರೆ ದಿನಾಂಕ ೧೮–೦೮–೨೦೦೮ ರಂದು 'ಸಂಶೋಧನೆ' ಬಗ್ಗೆ ಒಂದು ಕಮ್ಮಟ ಹಾರೂಗೇರಿಯಲ್ಲಿ ಏರ್ಪಟ್ಟಾಗ ನಾನು ಭಾಗವಹಿಸಿದ್ದೇ. ಆ ಎರಡು ದಿವಸಗಳ ಸಂಶೋಧನ ಕಮ್ಮಟ ನನ್ನನ್ನು ಸಂಶೋಧನೆಯ ಕಡೆಗೆ ಎಳೆದುಕೊಂಡು ಬಂದಿತು. ನಾನು ಪದವಿ ಪೂರ್ವ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿರುವುದರಿಂದ ಅಧ್ಯಯನಕ್ಕೆ ಅಡ್ಡಿಯಾಗಬಹುದು ಎಂದು ಸುಮ್ಮನಾಗಿದ್ದೆ ಆದರೆ ನಮ್ಮ ಅಕ್ಕಳಾದ ಮುಧೋಳ ಕಾಲೇಜಿನ ಕನ್ನಡ ಉಪನ್ಯಾಸಕಿ ಶ್ರೀಮತಿ ಗಿರಿಜಾ ಅಣ್ಣೆಪ್ಪನವರ ಪ್ರೇರಣೆ ಹಾಗೂ ಒತ್ತಾಯಕ್ಕೆ ಮಣಿದು ಪ್ರವೇಶ ಪರೀಕ್ಷೆಗೆ ಕುಳಿತೆ. ಪರೀಕ್ಷೆ ಪಾಸಾಗಿ ಪ್ರವೇಶ ಪಡೆದೆ. ಆದರೆ ಪ್ರತಿನಿತ್ಯ ವಾರಕ್ಕೆ ನಾಲ್ಕು ದಿವಸ ವರ್ಗಗಳಿಗೆ ಹಾಜರಾಗುವಾಗ ನಾನು ಪಟ್ಟ–ಕಷ್ಟ ಹೇಳತೀರದು. ಪದವಿ ಪೂರ್ವ ಕಾಲೇಜಿನಲ್ಲಿ ಪ್ರತಿಯೊಂದು ಕೆಲಸಗಳ ಒತ್ತಡ ನನ್ನ ಮೇಲಾಯಿತು.

ನನಗೆ ಎಮ್.ಫಿಲ್ ಪದವಿ ಅಧ್ಯಯನಕ್ಕೆ ಅವಕಾಶಮಾಡಿ ಕೊಟ್ಟ ಹಂಪಿ ವಿಶ್ವವಿದ್ಯಾಲಯದ ಉಪಕುಲಪತಿ ಡಾ॥ ಎ. ಮುರಗೇಪ್ಪ ಗುರುಗಳಿಗೆ ಹಾಗೂ ಕನ್ನಡ ಅಧ್ಯಯನ ಕೇಂದ್ರಕ್ಕೆ ನನ್ನ ಅನಂತ ಧನ್ಯವಾದಗಳು. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಸಂಸ್ಥೆಯ ನಿರ್ದೇಶಕರು, ಸಂಯೋಜಕರು, ಕಾಲ ಕಾಲಕ್ಕೆ ಪಾಠಪ್ರವಚನ ಹಾಗೂ ಸಕಾಲಕ್ಕೆ ಗ್ರಂಥಾಲಯದ ಪುಸ್ತಕಗಳನ್ನು ಒದಗಿಸಿಕೊಟ್ಟಿದ್ದಕ್ಕೆ ಅನಂತ ಅನಂತ ಧನ್ಯವಾದಗಳು.

ಶ್ರೀ ವೃಷಬೇಂದ್ರ ಶಿಕ್ಷಣ ಸಂಸ್ಥೆಯ ಪ್ರಾಚಾರ್ಯರಾದ ಶ್ರೀ ಈರಣ್ಣ ಕೊಕಟನೂರ ಗುರುಗಳಿಗೆ ಹಾಗೂ ನನ್ನ ಸಕಲ ಗುರುವೃಂದಕ್ಕೆ ನನ್ನ ಅನಂತ ಕೋಟಿ ನಮನಗಳು.

ಅಧ್ಯಯನ ಕೇಂದ್ರಕ್ಕೆ ಬಂದಾಗ ನನ್ನ ಆತ್ಮೀಯ ಹಾಗೂ ಪೂಜ್ಯ ಗುರುಗಳಾದ ಡಾ॥ ಆರ್. ಬಿ. ಚಿಲಮಿ ಹಾಗೂ ಡಾ॥ ವ್ಹಿ. ಎಸ್. ಮಾಳಿ ಗುರುಗಳಿಗೆ ನನ್ನ ಅನಂತ ಅನಂತ ಕೃತಜ್ಞತೆಗಳನ್ನು ಸಲ್ಲಿಸುವೆನು. ಚಿಲಮಿ ಗುರುಗಳು ಮಾರ್ಗದರ್ಶನ ನೀಡಿದರೆ, ಮಾಳಿ ಗುರುಗಳು ಅದಕ್ಕೆ ಹೊಸ ವಿಚಾರಗಳನ್ನು ಸೇರ್ಪಡೆ ಮಾಡುವ ಚಿಕಿತ್ಸಾಮನೋಭಾವ ನನ್ನನ್ನು ಚಿಂತನೆಗೆ ಒಳಪಡಿಸಿತು. ಈ ಹಾಸ್ಯ ನಿಬಂಧ ಅಧ್ಯಯನ ಮಾಡಬೇಕಾದ ವಿಷಯವನ್ನು ಯಾವ ರೀತಿ ಅಧ್ಯಯನದ ಚೌಕಟ್ಟಿಗೆ ಒಳಪಡಿಸಬೇಕು ಎಂದು ಚಿಂತೆಗೆ ಒಳಪಟ್ಟೆ. ಆದರೆ ಮಾರ್ಗದರ್ಶಕರ ಸಲಹೆಯಿಂದ ಈ ಎಲ್ಲ ನಿಬಂಧ ಬರೆದು ಮುಗಿಸಿದಾಗ ಆದ ಸಂತೋಷ ಅಷ್ಟಿಷ್ಟಲ್ಲ. ನನ್ನ ನಿಬಂಧಕ್ಕೆ ಆಕರ ಗ್ರಂಥ (ವಿಷಯವಸ್ತು)ವನ್ನು ಒದಗಿಸಿಕೊಟ್ಟ ಹಾಸ್ಯ ಅಂಕಣಬರಹಗಾರರಾದ ಶ್ರೀ ಮಲ್ಲಿಕಾರ್ಜುನ ರುದ್ರಪ್ಪ ಹುಲಗಬಾಳಿಯವರಿಗೆ ನನ್ನ ಅನಂತ ಅನಂತ ಧನ್ಯವಾದಗಳು.

ಬಿ.ಎನ್.ಕೆ. ಸಂಯುಕ್ತ ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಬಿ. ಕೆ. ಕುಲಕರ್ಣಿ ಹಾಗೂ ಪ್ರೌಢಶಾಲೆಯ ಗುರುವೃಂದಕ್ಕೆ ಹಾಗೂ ಕಾಲೇಜಿನ ನನ್ನ ಸಹೋದ್ಯೋಗಿಗಳಿಗೆ ಅನಂತ ಧನ್ಯವಾದಗಳು.

ಎಸ್.ವ್ಹಿ.ಎಸ್. ಕಾಲೇಜಿನ ಗ್ರಂಥಪಾಲಕರಾದ ಶ್ರೀ ಬಿ. ಆರ್. ಸಾಲಿಮಠ ಹಾಗೂ ಶ್ರೀಮತಿ ಅಣ್ಣಿಗೇರಿಯವರು ಗ್ರಂಥಾಲಯದಿಂದ ನನಗೆ ಪುಸ್ತಕಗಳನ್ನು ಒದಗಿಸಿದಕ್ಕಾಗಿ ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಶ್ರೀ ಎಮ್. ಬಿ. ಮರಡಿ ಹಾಗೂ ಶ್ರೀ ಎಮ್. ಬಿ. ಯಾದಗುಡಿ ಗುರುಗಳಿಗೆ ನನ್ನ ಕೃತಜ್ಞತೆಗಳು. ನನ್ನ ಅಣ್ಣಾ–ಅಕ್ಕ, ತಮ್ಮಂದಿರು ಹಾಗೂ ಅತ್ತಿಗೆಯವರಿಗೂ ಹಾಗೂ ಅಶ್ವಿನಿ, ನಮ್ಮ ಮಾವನವರಾದ ಶ್ರೀ ಚಂದ್ರಶೇಖರ ಗೌಡಪ್ಪನವರ ಅವರಿಗೂ ನನ್ನ ವಂದನೆಗಳು. ಪುಟಾಣಿಗಳಾದ ಗುರುಕಿರಣ, ಪ್ರಜ್ವಲ, ಸ್ಫೂರ್ತಿ, ಸುಹಾಸ ಇವರಿಗೆ ನನ್ನ ಸವಿನೆನಪುಗಳು. ದರೂರ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ. ಆರ್. ದರೂರ ಹಾಗೂ ಸಂಚಾಲಕ ಸಮಿತಿ ಸದಸ್ಯರಾದ ಶ್ರೀ ಆರ್. ಎಸ್. ಯಲಶೆಟ್ಟಿಯವರಿಗೆ ನನ್ನ ನಮಸ್ಕಾರಗಳು. ಹಾಗೂ ಅಚ್ಚು ಕಟ್ಟಾಗಿ ಡಿ.ಟಿ.ಪಿ ಮಾಡಿದ ಹಾಗೂ ಸಕಾಲಕ್ಕೆ ಗ್ರಂಥ ಬಿಡುಗಡೆಗೆ ಕಾರಣರಾದ ಕು. ಮುರಗೇಶ ಗು. ಕೌಲಾಪುರ ಅವರಿಗೆ ವಂದನೆಗಳು.

ಕು. ರಾಜಶ್ರೀ ಜಿ. ಹುಬ್ಬಳ್ಳಿ
ಸಂ.ಪ.ಪೂ. ಮಹಾವಿದ್ಯಾಲಯ,
*ಮುಗಳಖೋಡ.*
ತಾ. ರಾಯಬಾಗ ಜಿ. ಬೆಳಗಾವಿ

ದಿನಾಂಕ : 21–09–2009
ಸ್ಥಳ : ಮುಗಳಖೋಡ

# ಪರಿವಿಡಿ

# ಅಧ್ಯಾಯ - ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ

## ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ

**ಪೀಠಿಕೆ :**

**"ನಗುವುದು ಸಹಜ ಧರ್ಮ: ನಗಿಸುವುದು ಪರಧರ್ಮ ।**
**ನಗುವ ಕೇಳುತ ನಗುವುದತಿಶಯದ ಧರ್ಮ ॥**
**ನಗುವ ನಗಿಸುವ ನಗಿಸಿ ನಗುತ ಬಾಳುವ ವರ್ಗವಾ**
**ಮಿಗೆ ನೀನು ಬೇಡಿಕೊಳೊ ಮಂಕುತಿಮ್ಮ ॥"** [1]

'ನಗುವೇ ಹಾಸ್ಯ, ಹಾಸ್ಯವೇ ನಗು'. ನಗು –ಅಳು ನಮ್ಮ ಜೀವನದಲ್ಲಿ ಹಾಸು ಹೊಕ್ಕಾಗಿರುವುದು. ನಗುವಿನಿಂದ ನಾವು ಆರೋಗ್ಯವಂತರಾಗಿ ಹಾಗೂ ಸಂತೋಷದಿಂದ ಬದುಕಬಹುದು, ಆದರೆ ಯಾವತ್ತೂ ನಗುವವನು ಬುದ್ಧಿಭ್ರಮನೆಗೆ ಒಳಗಾಗಿರುವನು. ನಗು ನಮ್ಮ ಜೀವನದಲ್ಲಿ ಹೊಸ ಚೈತನ್ಯವನ್ನುಂಟು ಮಾಡುವುದು. ಹಾಸ್ಯಗಾರ ನಗಿಸುವನು ತನ್ನೆಲ್ಲ ದುಃಖಗಳನ್ನು ಮರೆಮಾಚಿ, ಬೇರೆಯವರನ್ನು ಸಂತೋಷ ಪಡಿಸಲು. ಹಾಸ್ಯ ಪ್ರವೃತ್ತಿ ಕೆಲವೊಬ್ಬರಿಗೆ ಹುಟ್ಟಿನಿಂದ ಬಂದಿರುವುದು.

ಹಾಸ್ಯ ಮಾನವನ ಸಹಜ ಗುಣ. ತಮ್ಮ ಸಂತೋಷಕ್ಕಾಗಿ ಬೇರೆಯವರನ್ನು ಉದ್ದೇಶಿಸಿ, ಅಲ್ಲಿ ಹಾಸ್ಯವುಂಟಾಗಬಹುದು, ಹಾಸ್ಯದ ಲಾಸ್ಯ ಜೀವನದಲ್ಲಿ ಇಲ್ಲವಾದರೆ ಆ ವ್ಯಕ್ತಿ ದೇವರಾಗಿರಬಹುದು. ಯಾವ ವ್ಯಕ್ತಿ ಜೀವನದಲ್ಲಿ ಎಂಥ ಕಷ್ಟ ಬಂದರೂ ನಗುನಗುತಾ ಸ್ವಾಗತಿಸಿ, ಅವುಗಳಿಗೆ ಪರಿಹಾರ ಕಂಡುಕೊಳ್ಳುವನು. ಅವನು ನಿಜವಾಗಲೂ ಸುಖಿಯಾಗಿರುವನು. ಸಂತೋಷವನ್ನು ಎಲ್ಲರ ಜೊತೆ ಹಂಚಿಕೊಳ್ಳಬಹುದು. ಆದರೆ ದುಃಖವನು ಒಬ್ಬರೇ ಅನುಭವಿಸಬೇಕಾಗುವುದು.

ಮಹಾಕಾವ್ಯಗಳಲ್ಲಿ, ಭರತನ 'ನಾಟ್ಯಶಾಸ್ತ್ರ'ದಲ್ಲಿ ಹಾಸ್ಯದ ಬಗ್ಗೆ ಪ್ರಸ್ತಾಪಿಸಿದ್ದು ಕಂಡುಕೊಳ್ಳಬಹುದಾಗಿದೆ. ಅನಾದಿ ಕಾಲದಲ್ಲಿ ಮನುಷ್ಯ ಅನಾಗರಿಕತೆಯಿಂದ ನಾಗರಿಕತೆ ಕಡೆಗೆ ಸಾಗಿದಾಗ ಆತನಲ್ಲಿ ಹಾಸ್ಯ ಪ್ರವೃತ್ತಿ ಹುಟ್ಟಿಕೊಂಡಿತು.

**ರತಿರ್ಹಾಸಶ್ಚ ಶೋಕಶ್ಚ ಕ್ರೋಧೋತ್ಸಾಹೌ ಭಯಂತಥಾ ।**
**ಜುಗುಪ್ಸಾ ವಿಸ್ಮಯಶ್ಚೇತಿ ಸ್ಥಾಯಿ ಭಾವಾ: ಪ್ರಕೀರ್ತಿತಾಃ ॥** [2]

ಭರತಮುನಿಯು ಹೇಳಿದ ನವರಸಗಳಲ್ಲಿ ಎರಡನೆಯ ಸ್ಥಾನವನ್ನು ಹಾಸ್ಯಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾನೆಂದು ಹೇಳಬಹುದಾಗಿದೆ. ಹಾಸ್ಯದ ಸ್ಥಾಯಿ ಭಾವ ಹಾಸ. ಒಂಬತ್ತು ರಸಗಳು ಹಾಗೂ

---

೧. 'ಮಂಕುತಿಮ್ಮನ ಕಗ್ಗ' – ಡಿ.ವ್ಹಿ.ಜಿ. ಪುಟ – ೯೧೭.
೨. 'ಭಾರತೀಯ ಕಾವ್ಯ ಮೀಮಾಂಸೆ' – ತಿ.ನಂ.ಶ್ರೀ. – ಪುಟ ೨೩೩.

ಸ್ಥಾಯಿ ಭಾವಗಳ ಬಗ್ಗೆ ವಿವರಣೆ ನೀಡಿದ್ದಾನೆ.

ರಸಗಳಲ್ಲಿ ಒಂದೆಂದು ಪರಿಗಣಿತವಾದ ಹಾಸ್ಯಕ್ಕೆ ನಮ್ಮ ಪುರಾತನರಿಂದ ಅದರ ಸತ್ವ, ಸ್ವರೂಪ, ವ್ಯಾಪ್ತಿ, ಪ್ರಯೋಜನಗಳಿಗೆ ಪೂರಕವಾದ, ಅನುರೂಪವಾದ ಭಾಷ್ಯ ಮರ್ಯಾದೆ ದೊರೆತಿಲ್ಲ. ಅವರ ಅಭಿಪ್ರಾಯದಂತೆ ಅದು ಮೂಲ ರಸವಲ್ಲ, ಜನ್ಯರಸವೆಂಬ ಅಭಿಪ್ರಾಯವಿತ್ತೆಂದು ಕಂಡು ಬರುತ್ತದೆ.

**ಉದ್ದೇಶ :**

"ನಕ್ಕಾವ ಗೆದ್ದಾಂವ" ನಮ್ಮ ವರಕವಿ ಬೇಂದ್ರೆಯವರು ಅಭಿಪ್ರಾಯವ್ಯಕ್ತಪಡಿಸಿದ್ದಾರೆ. ನಗು ನಮ್ಮ ಗೆಲುವಿನ ಸಂಕೇತ. ಅದು ಸಹಜ, ವ್ಯಂಗ್ಯ, ವಿಡಂಬನೆಯಿಂದ, ಅಪಹಾಸ್ಯದಿಂದ ಕೂಡಿರುತ್ತದೆ. ಮನುಷ್ಯನಿಗೆ ನಗು ಸಹಜ. ಅದು ಮಾನವನಿಗೆ ಮಾತ್ರ ದೊರೆತ ವಿಶಿಷ್ಟ ಗುಣ. ಈ ನಗುವೇ ಮಾನವನನ್ನು ಪ್ರಾಣಿಗಳಿಂದ ಭಿನ್ನವಾಗಿ ಮಾಡುತ್ತದೆ.

ಯಾಂತ್ರಿಕ ಬದುಕಿನಲ್ಲಿ ಹಾಸ್ಯ, ಜೀವನದಲ್ಲಿ ಹೊಸ ಚೈತನ್ಯವನ್ನು ಉಂಟು ಮಾಡುತ್ತದೆ. ನಗುವುದಕ್ಕಾಗಿ ಅನೇಕ ಸಂಘ–ಸಂಸ್ಥೆಗಳು ಆಗಾಗ ಹಾಸ್ಯ ಕಾರ್ಯಕ್ರಮಗಳನ್ನು ಏರ್ಪಡಿಸುತ್ತವೆ. ದೂರದರ್ಶನದಲ್ಲಿ ಬರುವ ಹಾಸ್ಯ ಕಾರ್ಯಕ್ರಮಗಳು ಮಾನವನ ಬೇಸರವನ್ನು ದೂರ ಮಾಡುತ್ತವೆ.

ಹಾಸ್ಯದ ಲಾಸ್ಯ ನಮ್ಮ ಜೀವನದಲ್ಲಿ ನೋವನ್ನು ದೂರ ಮಾಡಿ ಹೊಸ ಚೈತನ್ಯವನ್ನು ನೀಡುತ್ತದೆ. ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದಲ್ಲಿ ಬರುವ ಪಾತ್ರಗಳೆಂದರೆ ವಿರಾಟರಾಜನ ಪುತ್ರ 'ಉತ್ತರ ಕುಮಾರ'ನ ಪೌರುಷ ಹಾಸ್ಯಕ್ಕೆ ಮೀಸಲಾಗಿದೆ. 'ಶೂರ್ಪನಖಿ' ಪಾತ್ರ ಕೂಡ ಹಾಸ್ಯವನ್ನು ಉಂಟು ಮಾಡುವುದಾಗಿದೆ.

ದೊಡ್ಡಾಟ, ಸಣ್ಣಾಟಗಳಲ್ಲಿ ಬರುವ 'ದೂತಿ' ಹಾಗೂ 'ಗೊಡ್ಡಿ' ಪಾತ್ರಗಳು ಹಾಸ್ಯಕ್ಕೆ ಮೀಸಲಾಗಿವೆ. 'ಯಕ್ಷಗಾನ'ದಲ್ಲಿ ಅಲ್ಲಲ್ಲಿ ಹಾಸ್ಯ ಪಾತ್ರಗಳನ್ನು ಕಂಡುಕೊಳ್ಳಬಹುದಾಗಿದೆ. ಪಾಶ್ಚಾತ್ಯರಲ್ಲಿ 'ಚಾರ್ಲ್ಲೆ ಚಾಪ್ಲಿನ್' ಹಾಸ್ಯ ಪಾತ್ರಕ್ಕೆ ಮೀಸಲಾಗಿರುವಂತೆ ನಮ್ಮ ಚಲನ ಚಿತ್ರಗಳಲ್ಲಿ 'ಮೆಹಮೂದ್' ಹಾಗೂ 'ಎನ್.ಎಸ್.ರಾವ್', 'ಅಶೋಕ ಬಾದರದಿನ್ನಿ' ಇವರನ್ನು ಕೂಡ ಹೆಸರಿಸಬಹುದಾಗಿದೆ. ಹಾಸ್ಯದ ಮೂಲಕ ಈ ಹಾಸ್ಯ ನಟರೂ ಗಂಭೀರ ಪಾತ್ರಗಳು ಹೇಳದೇ ಇರುವ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ.

ನಮ್ಮ ಸಾಹಿತ್ಯದಲ್ಲಿ ಕಥೆ, ಕವನ, ಕಾವ್ಯ, ಕಾದಂಬರಿ ಜೊತೆಗೆ ಹಾಸ್ಯ ಸಾಹಿತ್ಯ ಹುಟ್ಟಿಕೊಂಡಿತು. ಹಾಸ್ಯ ಸಾಹಿತಿಗಳಾದ ಬೀಚಿ, ಲಾಂಗೂಲಾಚಾರ್ಯ, ಬೇಂದ್ರೆ, ನಾ ಕಸ್ತೂರಿ, ರಾ.ಶಿ. ಗೊರೂರು, ಟಿ. ಸುನಂದಮ್ಮ, ಭುವನೇಶ್ವರಿ ಹೆಗಡೆ, ಗುರುದೇವಿ ಹುಲೆಪ್ಪನವರಮಠ ಇವರ ಸಾಲಿನಲ್ಲಿ ನಿಲ್ಲತಕ್ಕವರು ಹಾಗೂ ನನ್ನ ಗಮನವನ್ನು ಸೆಳೆದ ಹಾಸ್ಯ ಸಾಹಿತಿ ಮಲ್ಲಿಕಾರ್ಜುನ ಹುಲಗಬಾಳಿಯವರು ಒಬ್ಬರು. ಅವರ ಹಾಸ್ಯ ಕೃತಿಗಳ ಅಧ್ಯಯನದ ಉದ್ದೇಶವೇ ನನ್ನ ಸಂಪ್ರಬಂಧದ ಉದ್ದೇಶವಾಗಿದೆ.

**ಸ್ವರೂಪ :**

ನಗುವೇ ಎಲ್ಲ ದುಃಖಗಳಿಗೆ ದಿವ್ಯೌಷಧಿ ಪ್ರಾಚೀನರು ಆಗಾಗ ನಾಟಕ, ದೊಡ್ಡಾಟ ಮೂಲಕ ಜನರನ್ನು ಸಂತೋಷದ ಕಡಲಲ್ಲಿ ಮುಳುಗಿಸುತ್ತಿದ್ದರು. ಆದರೆ ಆಧುನಿಕ ಯಾಂತ್ರಿಕ ಯುಗದಲ್ಲಿ ಹಣ ಕೊಟ್ಟು ಸಂತೋಷ ಪಡೆಯುವ ಸ್ಥಿತಿ ಬಂದೊದಗಿದೆ. ಆಧುನಿಕ ಮಾನವ ನಗುವುದು ಕ್ವಚಿತ, ಬಾಳುವುದು ಅನಿಶ್ಚಿತ. ತನ್ನ ಯಾಂತ್ರಿಕ ಬದುಕಿನ ಬೇಗುದಿಯಲ್ಲಿ ಹೃದಯ ಕಾಯಿಲೆ, ಸಕ್ಕರೆ ಕಾಯಿಲೆಗಳಿಗೆ ತುತ್ತಾಗಿ ನರಳುವುದು ಸಹಜವಾಗಿದೆ. ವಿಘಟನೆಗೊಂಡ ಕುಟುಂಬಗಳು ಕೂಡ ಮಾನವನ ನಗುವನ್ನು ಕಿತ್ತುಕೊಂಡಿವೆ. ಸತಿಪತಿಗಳು ನೌಕರಿಯಿಂದ ಬಳಲಿ ಬೆಂಡಾಗಿ ಬಂದಾಗ ಹಾಸ್ಯ ಅಲ್ಲಿ ಸಿಗುವುದು ದುರ್ಲಭ, ಇದು ಮಕ್ಕಳ ಮೇಲೂ ಪ್ರಭಾವ ಬೀರದೆ ಇರದು.

ಹಾಸ್ಯ ಬೀಜವನ್ನು ಬಿತ್ತದೆ ನಗು ಪೈರನ್ನು ಬೆಳೆಯುವುದು ದುಸ್ಸಾಧ್ಯವಾದರೂ ಅಸಾಧ್ಯವಲ್ಲ. ಬಾಲ ವರ್ಗದ ನಲಿದಾಟ, ಹುಚ್ಚರ ಉನ್ಮಾದ, ಬೇರೆಯವರನ್ನು ಕಂಡು ಅಪಹಾಸ್ಯ ಮಾಡಿ ಗಹಿಂಗಹಿಸಿ ನಗುವಿಕೆ ಇವು ಹಾಸ್ಯವಲ್ಲ, ಹಾಸ್ಯಕ್ಕೆ ಪ್ರೇರಣೆಗಳು.

ಸುಖಪುರುಷನಿಗೆ ಮಾತ್ರವೆಂದು ಪ್ರಕೃತಿದೇವತೆ ನೆಯ್ದಿಟ್ಟಿರುವ ವಸ್ತ್ರವಲ್ಲ ಹಾಸ್ಯ. ಬಡವ, ಭಾಗ್ಯವಂತ, ಯುವಕ, ಮುದುಕ, ಹಳ್ಳಿಯವ, ದಿಲ್ಲಿಯವ, ಹೆಂಗಸು–ಗಂಡಸು ಯಾರು ಬೇಕಾದರೂ ಅದನ್ನು ಧರಿಸಿ ಹರ್ಷಪಡಬಹುದು. ಅವರವರ ಆಕಾರ, ಅಪೇಕ್ಷೆಗಳಿಗೆ ಸಮನಾಗಿ ತನ್ನ ಉದ್ದಳತೆಯನ್ನು ಹೆಚ್ಚು ಕಡಿಮೆ ಮಾಡಿಕೊಳ್ಳುವ ಮಾಂತ್ರಿಕ ಶಕ್ತಿ ಅದಕ್ಕಿದೆ.

ಜೀವನ ನಮಗೆ ಸಹ್ಯವಾಗಬೇಕಾದರೆ ಏನು ಮಾಡಬೇಕೆಂಬುದನ್ನು ಬೀಚಿಯವರು –

**"ಎಲ್ಲರೂ ನಗಬೇಕು, ನಗು ಜೀವದುಸಿರು**
**ಬಲ್ಲವರ ಹಾಸ್ಯ ರಸಕವಳದೂಟ"** [೩]

ಎಂದು ಹೇಳಿ. ಮತ್ತೆ 'ನಗುವಿನಲಿ, ಊಟದಲಿ ಅನುಗಾಲ ಶುಚಿ ಇರಲಿ' ಎಂದು ತಮ್ಮ ಅಭಿಪ್ರಾಯವನ್ನು ನಗುವಿನ ಬಗ್ಗೆ ವ್ಯಕ್ತಪಡಿಸಿದ್ದಾರೆ.

ಹಾಸ್ಯದ ಬಗ್ಗೆ ಇರುವ ವಿವಿಧ ಪಾಶ್ಚಾತ್ಯ ಸಾಹಿತಿಗಳ ವ್ಯಾಖ್ಯೆಗಳು :

* ಹರ್ಬರ್ಟ್ ಸ್ಪೆನ್ಸರನ ಪ್ರಕಾರ – "ನಗುವೆಂದರೆ ಅರ್ಧ ಸೆಳವಿನ ಕ್ರಿಯೆಗಳು"
* ಹಾಬ್ಸನು ಈ ರೀತಿ ಅಭಿಪ್ರಾಯಟ್ಟಿದ್ದಾನೆ – "ಮೋರೆಯನ್ನು ಸೊಟ್ಟಗೆ ಮಾಡುವುದು"
* ಹಲವರು ನಗುವನ್ನು – " ಒಂದು ಜಾತಿಯ ನರಗಳ ಚಲನವಲನವೆಂದು"

ಅಭಿಪ್ರಾಯ ಪಟ್ಟಿದ್ದುಂಟು.

* ಜಾರ್ಜ್ ಮೆಂಡಿತ್ ಕವಿಯ ಪ್ರಕಾರ – "ಚಿಂತನಾಮಯುವಾದ ನಗುವೇ"

ವಿನೋದವೆಂದು ಅಭಿಪ್ರಾಯ ಪಟ್ಟಿದ್ದಾರೆ.

* ಸ್ಪಿನೋಜ್ ಅವರ ಅಭಿಪ್ರಾಯದಂತೆ –

"ನಗುವೂ ತಮಾಷೆಯೂ ಒಂದು ವಿಧದ ನಲಿವು" ವೆಂದು ಹೇಳಿರುವನು.

ಷೇಕ್ಸಪಿಯರ್ ಸೃಷ್ಟಿಸಿದ ಟಿಟ್‌ಸ್ಟನ್ ಪಾತ್ರ ಲೋಕಪ್ರಸಿದ್ಧ ವಿದೂಷಕ ವ್ಯಕ್ತಿಯಾಗಿದ್ದಾನೆ.

---

೩. 'ಅಂದನಾ ತಿಮ್ಮ' – ಬೀಚಿ – ಪುಟ ೧೪೩

**ವಿಡಂಬನೆ :**

ಉದ್ದೇಶಪೂರ್ವಕವಾದ ಸ್ಪಷ್ಟವಾದ ಅಪಹಾಸ್ಯವೇ ವಿಡಂಬನೆ. ಸೂಜಿ ಮೊನೆಯಷ್ಟಾದರೂ ಚುಚ್ಚಿ ನೋಯಿಸುವುದೇ ಅದರ ಬಿಡಲಾರದ ಬಯಕೆ.

ರನ್ನನ – "ಸಾರಂಸಭೀಮ ವಿಜಯ"ದಲ್ಲಿ – 'ಪನ್ನೊಂದನೆಯ ಸೂತಾವತಾರಮುಂ ಹರಿಗಾಯ್ತು' ಎಂಬ ವಿಡಂಬನೆ ಕಂಡು ಬರುತ್ತದೆ.

ಹಾಸ್ಯ ಲೇಖಕರಲ್ಲಿ ಕೇವಲ ಹಾಸ್ಯವಷ್ಟೆ ಇರದು. ಅದರ ಜೊತೆಗೆ ವಿಡಂಬನೆ ಅಲ್ಲಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ.

ರನ್ನನ "ಸಾಹಸಭೀಮ ವಿಜಯಂ"ದಲ್ಲಿ ದ್ರೌಪದಿ ಪಾತ್ರ ಚಿತ್ರಣ ಜೊತೆಗೆ ಅವಳನ್ನು ವಿಡಂಬನಾತ್ಮಕ ಶೈಲಿಯಲ್ಲಿ ಚಿತ್ರಿಸಿದ್ದಾನೆ.

**"ಕುರುಕುಲಮಂ ನುಂಗಿದೆ ಯಿ**
**ನ್ನೆರೆಬರುವುಂ ನುಂಗಲಿರ್ಪೆ ಕುರುಪತಿಯುಮನಿ ।**
**ನ್ನೆರಡನೆಯ ಹಿಡಿಂಬಿಯನೆ**
**ಮ್ಮರಸಂ ರಕ್ಕಸಿಯನ್ನೆಲ್ಲಿ ತಂದನೊ ನಿನ್ನಂ ॥ "**

ದ್ರೌಪದಿ ಕುರುಕುಲಕ್ಕೆ ನಾಶಕಳಾಗಿ ಬಂದಳೆಂದು, ಕವಿ ಈ ರೀತಿಯಾಗಿ 'ಎರಡನೆಯ ಹಿಡಿಂಬಿ, ರಕ್ಕಸಿ' ಎಂದು ವಿಡಂಬಿಸಿದ್ದಾನೆ.

'ನಾಟ್ಯಶಾಸ್ತ್ರದಲ್ಲಿ'ದಲ್ಲಿ ಭರತಮುನಿ ಈ ರೀತಿಯಾಗಿ – ಹಾಸ್ಯರಸಕ್ಕೆ ಬೇಕಾದ ವಿಚಾರ ಹೇಳಿರುವನು.

**'ಸಚ ವಿಕೃತ ವೇಷಾಲಂಕಾರ ಧಾರ್ಷ್ಟ್ಯತಾಲ್ಯ ಕುಹಕಾ**
**ಸತ್ಪ್ರಲಾಪ ವ್ಯಂಗ್ಯದರ್ಶನ ದೋಷೋದಾಹರಣಾದಿ ಭಿಃ**
**ವಿಭಾವೈರುತ್ಪದ್ಯತೆ' ೩**

ವಿಕಾರವಾದ ಅನ್ಯರ ವೇಷಾಲಂಕಾರಗಳು, ನಾಚಿಕೆಗೇಡಿ ಸ್ವಭಾವ, ವಿಷಯ ಚಾಪಲ್ಯ ಮಾತು, ಕುಚೇಷ್ಟೆ, ಹೊಲಸುಮಾತು, ಅಂಗವೈಕಲ್ಯ, ಅನ್ಯರಮೇಲೆ ದೋಷಾರೋಪಣೆ ಮೊದಲಾದವುಗಳೇ ಹಾಸ್ಯ ರಸಕ್ಕೆ ವಿಭಾವಗಳು. ಕೆಳದುಟಿ, ಹಲ್ಲು, ಮೂಗು, ಗಲ್ಲಗಳ ನಡುಗುವಿಕೆಯಲ್ಲಿ, ಕಣ್ಣುಗಳ ವಿಕಾಸ ಆಕುಂಚನಗಳಲ್ಲಿ, ಬೆವರೊಡೆಯುವಲ್ಲಿ, ಮುಖ ಕಾಂತಿಯಲ್ಲಿ, ಮಗ್ಗುಲಿಗೆ ಹೊರಳಾಡುವುದರಲ್ಲಿ ಬಹಿರಂಗವಾಗಿ ಅವು ವ್ಯಕ್ತವಾಗುತ್ತವೆ.

ಅನುಕರಣೆಯಿಂದ ಕೂಡ ಹಾಸ್ಯ ಹುಟ್ಟಬಹುದಾಗಿದೆ. ಹುಡುಗರು ದೊಡ್ಡವರನ್ನು ಅನುಕರಿಸುತ್ತಾರೆ. ಯುವಕ ಯುವತಿಯರು ಸಿನಿಮಾ ನಟ ನಟಿಯರನ್ನ, ಒಂದು ಮೇಲ್ವರ್ಗ ಇನ್ನೊಂದು ವರ್ಗವನ್ನು, ಗ್ರಾಮಾಂತರದವರು ಪಟ್ಟಣಿಗರನ್ನು, ಒಂದು ದೇಶ ಮುಂದುವರಿದ ಇನ್ನೊಂದು

---

* ವ್ಯಾಖ್ಯೆಗಳನ್ನು 'ಹಾಸ್ಯ' ಕೃತಿ ಎಸ್. ವ್ಹಿ. ರಂಗಣ್ಣ ಪುಟ ೩-೬
೪. ರನ್ನನ – 'ಸಾಹಸ ಭೀಮವಿಜಯ' ದ್ವಿತೀಯಾಶ್ವಾಸ – ಪದ್ಯ ೮.
೩. 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' – ಡಾ. ಎಂ. ಎಸ್. ಸುಂಕಾಪುರ – ಪುಟ ೯೬

ದೇಶವನ್ನು ಸಕಲರೂ ತಮ್ಮ ತಮ್ಮ ಮೆಚ್ಚಿಗೆಯ ಮಹಾ ವ್ಯಕ್ತಿಗಳನ್ನ ಅನುಕರಣ ರೂಪದಲ್ಲಿಯೋ, ಅಜ್ಞಾನದಿಂದಲೋ, ಅಣಕರೂಪದಲ್ಲಿ ಅನುಕರಣೆ ನಡೆದರೆ ಅದರಿಂದ ಉಂಟಾದ ವಿನೋದ, ಸೋಗಿನ ನಟನೆಯೆಲ್ಲವೂ ನಗೆಗೇಡೆ; ಮನುಷ್ಯ ಎಂತು ನಗುವ ಪ್ರಾಣಿಯೋ ಅಂತೆಯೇ ನಗು ಹುಟ್ಟಿಸುವ ಪ್ರಾಣಿ.

**ವ್ಯಾಪ್ತಿ :**

ಹಾಸ್ಯ ಜೀವನದ ದುಃಖವನ್ನು ಹೊರ ಹಾಕಿ; ಹೊಸ ಜೀವನದ ಚಿಲುಮೆಯಂತೆ ಕಾರ್ಯ ನಿರ್ವಹಿಸುತ್ತದೆ. ಭರತನ 'ನಾಟ್ಯಶಾಸ್ತ್ರ'ದಲ್ಲಿ ಕೂಡ ಹಾಸ್ಯಕ್ಕೆ ಸ್ಥಾನವುಂಟು, ಆಧುನಿಕ ಸಾಹಿತ್ಯದಲ್ಲಿ ಪಾಶ್ಚಾತ್ಯರ ಪ್ರಭಾವದಿಂದ ಹಾಸ್ಯ ಮತ್ತಷ್ಟು ಪ್ರಾಧಾನ್ಯತೆ ಪಡೆಯಿತು. ಪಾಶ್ಚಾತ್ಯರ ಪ್ರಭಾವದಿಂದ ಸಾನೆಟ್, ಭಾವಗೀತೆ, ಪ್ರಗಾಥ, ಕಾದಂಬರಿ, ಹಾಸ್ಯ ಪ್ರಬಂಧಗಳು ಹುಟ್ಟಿಕೊಂಡವು.

ಪಾಶ್ಚಾತ್ಯರು ಹಾಸ್ಯದ ಬಗ್ಗೆ ತಮ್ಮದೇ ಅಭಿಪ್ರಾಯಗಳನ್ನು ವಿವಿಧ ರೀತಿಯಲ್ಲಿ ವ್ಯಕ್ತಪಡಿಸಿರುವರು. ಹಾಗೆಯೇ ನಮ್ಮ ಕನ್ನಡ ಸಾಹಿತ್ಯದ ಹಾಸ್ಯ ಬರಹಗಾರರು ಕೈಲಾಸಂ 'ನಾಟಕದ' ಮೂಲಕ, ಬೀಚಿ ಹರಟೆ, ಲಲಿತ ಪ್ರಬಂಧಗಳ ಮೂಲಕ, ಅ.ರಾ.ಮಿತ್ರ 'ಲಲಿತ ಪ್ರಬಂಧ'ಗಳಿಂದ ಚುಟುಕು ಬ್ರಹ್ಮ ದಿನಕರ ದೇಸಾಯಿ, ನಾ. ಕಸ್ತೂರಿ, ಲಾಂಗೂಲಾಚಾರ್ಯ, ರಾ.ಶಿ. ಗೊರೂರು, ಟಿ. ಸುನಂದಮ್ಮ, ಭುವನೇಶ್ವರಿ ಹೆಗಡೆ, ಗುರುದೇವಿ ಹುಲೆಪ್ಪನವರಮಠ ಹಾಗೂ ಹುಲಗಬಾಳಿ ಈ ಮೇಲಿನ ಎಲ್ಲ ಸಾಹಿತಿಗಳ ಸಾಲಿನಲ್ಲಿ ನಿಲ್ಲತಕ್ಕವರು; ಸಾಂಸ್ಕೃತಿಕ ಹಾಗೂ ಸಾಹಿತಿಗಳ ಬೀಡಾದ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಬನಹಟ್ಟಿ ಪಟ್ಟಣದವರಾದ ಮಲ್ಲಿಕಾರ್ಜುನ ಹುಲಗಬಾಳಿಯವರು ಒಬ್ಬರು.

ಅವರು ಜನಿಸಿದ್ದು ಬನಹಟ್ಟಿ ಪಟ್ಟಣದಲ್ಲಿ. ಅವರ ತಂದೆ ಹೈಸ್ಕೂಲ ಶಿಕ್ಷಕರು ಜೊತೆಗೆ ಅಗಾಧ ಪಾಂಡಿತ್ಯ ಹಾಗೂ ಹೊಸದನ್ನು ಕಲಿಯುವ ಉತ್ಕ್ರಷ್ಟವಾದ ಇಚ್ಛೆಯುಳ್ಳವರು. ಭಾಷೆ ಜೊತೆಗೆ ವಿಜ್ಞಾನ, ಭೂಗೋಳ, ಗಣಿತ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ಬೋಧಿಸುತ್ತಿದ್ದರು. ಅವರ ಇನ್ನೊಂದು ವಿಶೇಷ ಗುಣವೆಂದರೆ ತಮ್ಮ ಮಲಗುವ ಕೊಠಡಿಯಲ್ಲಿ ರ್‍ಯಾಂಕ ಪಡೆದ (ಪ್ರತಿಭಾನ್ವಿತ) ವಿದ್ಯಾರ್ಥಿಗಳ ಪಟ್ಟಿಯನ್ನು ನೇತು ಹಾಕಿದ್ದರು. ಭೆಟ್ಟಿಗೆ ಬಂದ ಅತಿಥಿಗಳಿಗೆ ಇವರು ನನ್ನ ನಿಜವಾದ ಆಸ್ತಿಯೆಂದು ಕೈಮಾಡಿ ತೋರಿಸುತ್ತಿದ್ದರು. ಅವರಿಗೆ ಮಕ್ಕಳಕ್ಕಿಂತ ಹೆಚ್ಚಾಗಿ ತಾವು ಕಲಿಸಿದ ವಿದ್ಯಾರ್ಥಿಗಳ ಮೇಲೆ ಅಪಾರವಾದ ಪ್ರೀತಿ, ಹೆಮ್ಮೆ ಇತ್ತೆಂದು ನಾವು ಕಂಡುಕೊಳ್ಳುತ್ತೇವೆ. ಅಂಥ ತಂದೆಯವರಿಂದ ಶಿಕ್ಷಣ ಪಡೆದ ಮಲ್ಲಿಕಾರ್ಜುನ ಹುಲಬಾಳಿಯವರು ಶಿಸ್ತು, ಸಂಯಮ. ಸಹನೆಗೆ ಸಾಕಾರಮೂರ್ತಿಯಂತಿದ್ದಾರೆ. 'ತಂದೆಗೆ ತಕ್ಕ ಮಗ' ಆಗಿದ್ದಾರೆ.

ಮಲ್ಲಿಕಾರ್ಜುನ ಹುಲಗಬಾಳಿಯವರ ಪೂರ್ವಜರ ಜನ್ಮಸ್ಥಳ ಜಮಖಂಡಿ ತಾಲೂಕಿನ ಹೊಸುರ ಗ್ರಾಮ ಅವರ ತಂದೆಯವರಾದ ರುದ್ರಪ್ಪ ಹುಲಗಬಾಳಿಯವರು ಶಿಕ್ಷಕರ ವೃತ್ತಿಯ ಜೊತೆಗೆ ಸಾಹಿತ್ಯ ಆಸಕ್ತರೂ ಆಗಿದ್ದರು. ಆಗಾಗ ಅವರ ಮನೆಗೆ ದಿವಂಗತ

ದು. ನಿಂ. ಬೆಳಗಲಿ, ಬ. ಗಿ. ಯಲ್ಲಟ್ಟಿ, ಬಿ. ಬಿ. ಮಹೀಷವಾಡಿ ಮುಂತಾದ ಸಾಹಿತಿಗಳು ಬರುತ್ತಿದ್ದು, ಅವರೊಂದಿಗೆ ಸಾಹಿತ್ಯ ವಿಚಾರಗಳ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಎಲ್ಲ ಸಾಹಿತಿಗಳ ಪ್ರಭಾವ ನಮ್ಮ ಅಚ್ಚು ಮೆಚ್ಚಿನ ಹಾಸ್ಯ ಸಾಹಿತಿ ಮಲ್ಲಿಕಾರ್ಜುನ ಹುಲಗಬಾಳಿಯವರ ಮೇಲೆ ಪ್ರಭಾವ ಬೀರದೆ ಇರಲಿಲ್ಲ.

ಬಿ. ಆರ್. ಪೋಲಿಸ್ ಪಾಟೀಲರು ಹೇಳುವಂತೆ ಶ್ರೀ ರುದ್ರಪ್ಪ ಹುಲಗಬಾಳಿ ಶಿಕ್ಷಕರು 'ನಮ್ಮ ಮಲ್ಲಪ್ಪನಿಗೆ ಗಟ್ಟಿಯಾದುದನ್ನು ಬರೆಯಲು ಹೇಳಿರಿ, ವಿನಾಕಾರಣ ಪತ್ರಿಕೆಗೆ ಯಾಕೆ ಅಂಕಣ ಬರೆಯಬೇಕೆಂದು' ಕೇಳುತ್ತಿದ್ದರು. ನಮ್ಮ ಸಾಹಿತಿಗಳಾದ ಹುಲಗಬಾಳಿಯವರು ಅವರ ತಂದೆಯ ಆಸೆಯಂತೆ, ಇಚ್ಚೆಯಂತೆ ಈಗ ನಿಜವಾಗಲೂ ಗಟ್ಟಿಯಾದ ಸಾಹಿತ್ಯವನ್ನು ರಚಿಸಿರುವರು. ಎಲ್ಲ ಮಹಾನ್ ಸಾಹಿತಿಗಳು ಕಥೆ, ಕಾದಂಬರಿ, ಆತ್ಮಕತೆ, ಪ್ರವಾಸಕಥನ ರಚಿಸಿರುವರು. ಆದರೆ ಹಾಸ್ಯ ಸಾಹಿತ್ಯವನ್ನು ರಚಿಸಿರುವುದು ವಿರಳ. ಅಂಥ ವಿರಳರಲ್ಲಿ ಜನರನ್ನು ಮುಟ್ಟುವ ಹಾಸ್ಯದ ಮೂಲಕ ಹಾಸ್ಯ ಸಾಹಿತ್ಯ ಕೃತಿಗಳಿಂದ ಹುಲಗಬಾಳಿಯವರು ಜನರನ್ನು ಹಾಸ್ಯದ ಹೊನಲಿನಲ್ಲಿ ಮುಳುಗಿಸಿದ್ದಾರೆ.

ಅವರ ಹಾಸ್ಯ ಕೃತಿಗಳು ಒಂದೊಂದು ಹಾಸ್ಯ ತೊರೆಗಳಾಗಿ ಹಾಸ್ಯದ ಕಡಲನ್ನೇ ಹುಟ್ಟು ಹಾಕಿವೆ. ಇವರ ಪ್ರಪ್ರಥಮ ಹಾಸ್ಯ ಕೃತಿ 'ಟೊಂಯ್ ಟೊಂಯ್ ಮಾತು'ಗಳಿಂದ ಪ್ರಾರಂಭವಾಗಿ, ದ್ವಿತೀಯ ಕೃತಿಯಲ್ಲಿ 'ಉದರೋಪನಿಷತ್' ಬಗ್ಗೆ ಪ್ರಸ್ತಾಪಿಸಲಾಗಿದೆ. ತೃತೀಯ ಕೃತಿಯಲ್ಲಿ 'ಗುಡ್ ಬೈ ಬಿಜಾಪೂರ' ಕೃತಿಯು ಬಿಜಾಪುರದ ಜೊತೆಗಿನ ಆತ್ಮೀಯವಾದ ಸಂಬಂಧ ವ್ಯಕ್ತವಾಗಿದೆ. ಚತುರ್ಥ ಕೃತಿಯಲ್ಲಿ 'ಚಷ್ಮಾಚರಿಷ್ಮಾ' ಹಾಸ್ಯ ಲೇಖನಗಳಿಂದ ಉತ್ಕೃಷ್ಟವಾಗಿದೆ. ಪಂಚಮ ಕೃತಿ 'ನಾಲಿಗೆಯ ಮೇಲೊಂದಿಷ್ಟು' ಓದುಗರನ್ನು ಎಚ್ಚರಿಸುವ ಸೂಕ್ತ ಸಲಹೆ ನೀಡುವ ಹಾಸ್ಯಮಯವಾಗಿದೆ. ಷಷ್ಠಿಯಾಕೃತಿಯ (ಆರನೆಯ) 'ಅನುಕೂಲಕ್ಕೊಂದು ಅವತಾರ' ಸಾಮಾಜಿಕವಾಗಿ, ಸಾಹಿತ್ಯಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಹೇಗೆ ಬಣ್ಣ ಬದಲಾಯಿಸುವರು ಎಂಬುದನ್ನು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ. ಕೊನೆಯದಾಗಿ ಏಳನೆಯ 'ಜನರಲ್ ಬೋಗಿ' ಕೃತಿಯಲ್ಲಿ ಹಲಗಬಾಳಿಯವರು ತಮ್ಮ ಕೌಟುಂಬಿಕ ವಿಚಾರಗಳನ್ನು ಅತಿ ಕನಿಷ್ಠವಾಗಿರುವ ಸುಣ್ಣ, ಗೇಟ, ಕಾಶಿಯಾತ್ರೆ, ಭೋಜನ ಬಗ್ಗೆ ಹಾಸ್ಯಮಯವಾಗಿ ಚಿತ್ರಿಸಿದ್ದಾರೆ. ಎಲ್ಲ ಕೃತಿಗಳನ್ನು ಓದಿದಾಗ ಓದುಗರನ್ನು ನಗೆಯ ಕಡಲಲ್ಲಿ ದೂಡುತ್ತವೆ. ಭಾರವಾದ ಮನಸ್ಸಿಗೆ ಇವರ ಹಾಸ್ಯ ಕೃತಿಗಳು ದಿವ್ಯೌಷಧಿಯಂತೆ ಕಾರ್ಯ ನಿರ್ವಹಿಸುತ್ತವೆ.

ಲೇಖಕರು ಅಂಕಣ ಬರಹಗಾರರಾಗಿದ್ದು; ತಮ್ಮ ಅಂಕಣ ಲೇಖನಗಳಿಂದ ಜನರಿಗೆ ಚಿರಪರಿಚಿತರು. ಆಕಾಶವಾಣಿಗಾಗಿ ನಾಟಕ ರಚಿಸಿದ್ದಾರೆ. ಜೀವನ ಚರಿತ್ರೆ ಕೃತಿ 'ಪರಂಜ್ಯೋತಿ' ಎಬರಟ್ಟಿ ಗ್ರಾಮದ ಪರಗೌಡಜ್ಜ, ಬಿರಾದಾರ, ಪಾಟೀಲರ ಜೀವನವನ್ನು ಓದುಗರಿಗೆ ಅತಿ ಸರಳವಾಗಿ ತಿಳಿಯುವ ಶೈಲಿಯಲ್ಲಿ ಚಿತ್ರಿಸಿದ್ದಾರೆ. 'ತೆನಾಲಿ ರಾಮಕೃಷ್ಣ ಕಥೆಗಳು', ಅಕ್ಬರ್-ಬೀರಬಲ್ ಕಥೆಗಳು ನವೀನ ರೀತಿಯಲ್ಲಿ ರಚಿತವಾಗಿದೆ. ಚಿಕ್ಕಮಕ್ಕಳಿಗೆ ಹೇಳುವ ಕಥೆಗಳಿಗಿಂತ ಹನ್ನೆರಡು ವರ್ಷದಿಂದ ಹದಿನೈದು ವರ್ಷಗಳ ಪ್ರೌಢಶಾಲಾ ಮಕ್ಕಳ ಬುದ್ಧಿಮಟ್ಟಕ್ಕೆ ತಕ್ಕಂತೆ ರಚಿಸಿದ್ದಾರೆ.

ಇವರ ಸಾಹಿತ್ಯದ ಹಿನ್ನೆಲೆ, ಹಾಸ್ಯ ಸಾಹಿತ್ಯದ ಉಗಮ-ವಿಕಾಸಗಳ ಬಗ್ಗೆ ಸ್ವಲ್ಪ

ತಿಳಿದುಕೊಳ್ಳುವುದು ಉಚಿತವೆನಿಸುವುದು. ಪ್ರಮುಖ ಕನ್ನಡದ ಹಾಸ್ಯ ಸಾಹಿತಿಗಳ ಕಿರು ಪರಿಚಯವನ್ನು ನಾವು ತಿಳಿದುಕೊಳ್ಳುವುದು ಸೂಕ್ತವಾಗಿದೆ.

**ಎ. ಎನ್. ಮೂರ್ತಿರಾವ :**

ಕನ್ನಡದ ಹೆಮ್ಮೆಯ ಪ್ರಬಂಧಕಾರರು, 'ಪ್ರಬಂಧ ಸಾಹಿತ್ಯದ ಆಚಾರ್ಯಪುರುಷರು'. ಅವರ 'ಹಗಲುಗನಸುಗಳು', 'ಅಲೆಯುವ ಮನ', 'ಮಿನಗು ಮಿಂಚು' ಸಂಕಲನಗಳು, ಕನ್ನಡ ಪ್ರಬಂಧ ಸಾಹಿತ್ಯಕ್ಕೆ ಬೆಲೆಯುಳ್ಳ ಕಾಣಿಕೆಗಳಾಗಿವೆ. ಇವರ ಪ್ರಬಂಧಗಳನ್ನು ಓದುವಾಗ ಆಶ್ಚರ್ಯ, ವಿಸ್ಮಯ, ಭಯ, ಆನಂದಗಳ ರಸಮಾಲಿಕೆಯಲ್ಲಿ ಹಾದು ಬಂದಂತಾಗುತ್ತದೆ. ಅವರ ಪ್ರಬಂಧಗಳಲ್ಲಿ ಅವರೇ ಪ್ರಮುಖ ಪಾತ್ರಧಾರಿಗಳಾಗಿದ್ದಾರೆ. ಅವರ 'ಹಗಲುಗನಸುಗಳು' ಕನ್ನಡ ರಸಿಕರಿಗೆ ಹೊಸ ಲೋಕವನ್ನೇ ತೆರೆಯಿತು.

**ವೀ. ಸೀತಾರಾಮಯ್ಯ :**

'ಪಂಪಾಯಾತ್ರೆ' ಭಾಷೆಯ ಬೆಡಗಿನಿಂದ ಆಕರ್ಷಕವಾಗಿದೆ. ಇವರು ಸ್ವಭಾವತಹ ರಸಿಕರು, ತಾವು ಕಂಡ ಬಾಳಿನ ವಿವಿಧ ಸನ್ನಿವೇಶಗಳನ್ನು ಕುರಿತು ಬಣ್ಣದ ಮಾತಿನಲ್ಲಿ ತಮ್ಮ ಕೃತಿಗಳಾದ 'ಬೆಳದಿಂಗಳು', 'ಮಳೆ', 'ಕಾಯಿಲೆ', 'ಹೆಣ್ಣು', 'ಸೀಕರಣೆ'ಯಲ್ಲಿ ಹಾಸ್ಯ, ವಿಡಂಬನೆ, ವ್ಯಂಗ್ಯ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಅವರ ಪ್ರಬಂಧಗಳು ಸಾಂಸ್ಕೃತಿಕ ಕಾಳಜಿ ಹಾಗೂ ಭಾವನಾತ್ಮಕ ರೀತಿಯಲ್ಲಿವೆ. ಅವರ ಮರೆಯಲಾಗದ ಪ್ರಬಂಧ 'ಮೈಸೂರು ರುಮಾಲು' ವಿಶಿಷ್ಟತೆಯಿಂದ ಕೂಡಿದೆ.

**ನಾ ಕಸ್ತೂರಿ :**

ಮಾತೃಭಾಷೆ ಮಲೆಯಾಳಿ ಆದರೂ ಕನ್ನಡ ಭಾಷೆಯ ಮೇಲೆ ಅವರ ಪ್ರೀತಿ ಅಪಾರ. ಅವರ 'ಉಪಾಯ ವೇದಾಂತ' ಸರಸ ವಿನೋದಗಳಿಂದ ಕೂಡಿದ ಕೃತಿ. ಹರಟೆ ಅವರ ಸಹಜ ಗುಣ. ಅವರ 'ಅನರ್ಥಕೋಶ' ವಿಡಂಬನಾತ್ಮಕ ಶೈಲಿಯಿಂದ ಕೂಡಿದೆ. 'ಪಾತಳದಲ್ಲಿ ಪಾಪಚ್ಚಿ' ಇನ್ನೊಂದು ಸೊಗಸಾದ ಕೃತಿ. 'ನನ್ನಬೆನ್ನು' ಇನ್ನೊಂದು ಪ್ರಮುಖ ಕೃತಿ.

**ರಾ. ಶಿ. :**

ಕೊರವಂಜಿಯ ರಾಶಿ ಒಬ್ಬ ಹರಟೆಗಾರರು. ಅವರ 'ತುಟಿ ಮೀರಿದವರು' ತುಂಬಾ ಪ್ರಸಿದ್ಧವಾದ ಹರಟೆಗಳ ಸಂಗ್ರಹ.

**ಬೀಚಿ :**

ಇವರ ಪೂರ್ಣ ಹೆಸರು ರಾಯಸಂ ಭೀಮಸೇನರಾವ್, ಬೀಚಿ ಎಂಬ ಕಾವ್ಯ ನಾಮದಿಂದಲೇ ಪ್ರಸಿದ್ಧರಾದವರು. ಹಾಸ್ಯಬ್ರಹ್ಮರೆನಿಸಿದ್ದ ಇವರಿಗೆ ಹಾಸ್ಯ ಪ್ರಜ್ಞೆ ಧಾರಾಳವಾಗಿತ್ತು. ಕುಳಿತಲ್ಲಿ, ನಿಂತಲ್ಲಿ

ಹಾಸ್ಯ ಉಕ್ಕಿಸುವ ಸ್ವಭಾವದವರು. 'ತಿಮ್ಮನ ತಲೆ'ಯಿಂದ ಏನೆಲ್ಲವನ್ನು ಮಿಂಚಿಸಿದವರು. ಇವರ 'ತಿಮ್ಮನ ತಲೆ' ಕೃತಿಯ ಹನ್ನೊಂದು ಸಲ ಮರು ಮುದ್ರಣಗೊಂಡಿದೆ. 'ಮಾತ್ರೆಗಳು', 'ಹುಚ್ಚು ಹುರುಳು', 'ಗಾಳಿಮಾತು' ಇವರ ಹರಟೆ ಕೃತಿಗಳಾಗಿವೆ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್ :**

'ನಮ್ಮೂರಿನ ರಸಿಕರು' ಎಂಬ ಕೃತಿಯಿಂದ ಪ್ರಸಿದ್ಧರಾದವರು. ಅಮೇರಿಕೆ ಕಂಡರೂ ತಮ್ಮ ಜನ್ಮಸ್ಥಳ ಮರೆಯದವರು. ಇವರ ಕೃತಿಗಳು 'ಗರುಡಗಂಬದ ದಾಸಯ್ಯ', 'ಹಳ್ಳಿಯ ಚಿತ್ರಗಳು', 'ಬೆಸ್ತರ ಕರಿಯ' ಇವೇ ಮೊದಲಾದವು.

**ದ. ರಾ. ಬೇಂದ್ರೆ :**

ವರಕವಿ ಬೇಂದ್ರೆಯವರು ಭಾವಗೀತೆಯ ರಚನೆಯ ಜೊತೆಗೆ ಹರಟೆಯನ್ನು ಕುರಿತು ಕೃತಿ ರಚಿಸಿದ್ದಾರೆ. 'ನಿರಾಭರಣ ಸುಂದರಿ'ಯಲ್ಲಿಯ ಹರಟೆಗಳು ನಮ್ಮ ಗಮನ ಸೆಳೆಯುತ್ತವೆ.

**ಟಿ. ಸುನಂದಮ್ಮ :**

ಹಾಸ್ಯ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಬೆರಳೆಣಿಕೆಯಷ್ಟು. 'ಜಂಬದ ಚೀಲ', 'ಪೆಪ್ಪರ್‌ಮೆಂಟು', 'ಸರಸಮಹತ್', 'ಸುನಂದಮ್ಮನವರ ಸಮಗ್ರ ಹಾಸ್ಯ ಸಾಹಿತ್ಯ' ಈ ಕೃತಿಗಳಿಂದ ಕನ್ನಡ ಹಾಸ್ಯ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ.

ಟಿ. ಸುನಂದಮ್ಮನವರ ನಂತರ ನಾವು ಸುನಂದಾ ಬೆಳಗಾಂವಕರ, ಜ್ಯೋತ್ಸ್ನಾ ಕಾಮತ್, ಅನುಪಮಾ ನಿರಂಜನ, ಸರೋಜಿನಿ ಶಿಂತ್ರಿ, ಅನುಸೂಯಾ ಸಿದ್ದರಾಮ, ಗುರುದೇವಿ ಹಲೆಪ್ಪನವರಮಠ, ಭುವನೇಶ್ವರಿ ಹೆಗಡೆ ಅವರನ್ನು ಹಾಸ್ಯ ಸಾಹಿತಿಗಳೆಂದು ಗುರುತಿಸಬಹುದಾಗಿದೆ.

ಈ ಎಲ್ಲ ಹಿರಿ ಕಿರಿಯ ಹಾಗೂ ಮಹಿಳಾ ಹಾಸ್ಯ ಸಾಹಿತಿಗಳನ್ನು ಅಧ್ಯಯನ ಮಾಡಿದಾಗ ನಮ್ಮ ಸಮೀಪ ಅಂದರೆ ಬನಹಟ್ಟಿ ಪಟ್ಟಣದಲ್ಲಿ ಜನಿಸಿದ ಮಲ್ಲಿಕಾರ್ಜುನ ಹುಲಗಬಾಳಿಯವರು ಕೂಡ ತಮ್ಮ ಹಾಸ್ಯ ಪ್ರಬಂಧ ಹಾಗೂ ಲಲಿತ ಪ್ರಬಂಧ, ಹಗುರ ಬರಹಗಳಿಂದ ಪ್ರಸಿದ್ಧಿ ಪಡೆದವರು.

ಬನಹಟ್ಟಿ ಕೇವಲ ಉದ್ಯಮನಗರ ಅಷ್ಟೇ ಅಲ್ಲ ಸಾಂಸ್ಕೃತಿಕ ಹಾಗೂಕಲೆಯಿಂದಲೂ, ಸಾಹಿತಿಗಳಿಂದಲೂ ಕೂಡಿದ್ದು, ನಮ್ಮನ್ನು ಆಕರ್ಷಿಸುತ್ತದೆ. ಸತ್ಯಕಾಮ, ಫ. ಗು. ಹಳಕಟ್ಟಿ, ಮಧುರಚೆನ್ನ, ಈಶ್ವರ ಸಣಕಲ್, ದು. ನಿಂ. ಬೆಳಗಲಿ, ಮಹೀಷವಾಡಿ, ಬ. ಗಿ. ಯಲ್ಲಟ್ಟಿ, ಬಿ. ಆರ್. ಪೋಲಿಸ ಪಾಟೀಲ ಎಲ್ಲ ಸಾಹಿತಿಗಳ ತವರೂರು (ನಾಡು) ಬಾಗಲಕೋಟ ಜಿಲ್ಲೆ. ಮಲ್ಲಿಕಾರ್ಜುನ ಹುಲಗಬಾಳಿಯವರು ವೃತ್ತಿಯಿಂದ ಪ್ರಾಧ್ಯಾಪಕರಾದರೂ, ಪ್ರವೃತ್ತಿಯಿಂದ ಸಾಹಿತಿ. ಕಥೆ, ಕಾದಂಬರಿ ಇವರನ್ನು ಆಕರ್ಷಿಸದೇ ಹಾಸ್ಯಕ್ಕೆ ಇವರು ಮನಸೋತರು. ಯಾಕೆಂದರೆ ಚಿಕ್ಕಂದಿನಿಂದ ಅವರ ಮೇಲೆ ಪ್ರಭಾವ ಬೀರಿದ ಹಾಸ್ಯ ಸಾಹಿತಿ ಬೀಚಿ ಹಾಗೂ ಅವರು ಮೂಲತಃ ಹಾಸ್ಯ ಜಾಯಮಾನದವರು.

ಅವರ ಹಾಸ್ಯ ಬರಹಗಳು ಸುತ್ತಮುತ್ತಲಿನ ವಸ್ತು, ಸ್ಥಿತಿ, ಘಟನೆ, ವ್ಯಕ್ತಿ ಹಾಗು ಸನ್ನಿವೇಶಗಳನ್ನು ಆಧರಿಸಿ ರಚಿಸಿರುವರು.

ನನ್ನ ಸಂಪ್ರಬಂಧ ಅಧ್ಯಯನಕ್ಕಾಗಿ ನಾನು ಹುಲಗಬಾಳಿಯವರ ಹಾಸ್ಯ ಪ್ರಬಂಧಗಳನ್ನು ಆಯ್ದುಕೊಂಡಿರುವಲ್ಲಿ ಒಂದು ವೈಶಿಷ್ಟ್ಯತೆಯಿದೆ. ಅವರು ಬಳಸಿದ 'ಉತ್ತರ ಕರ್ನಾಟಕದ ಭಾಷೆ ಅಲ್ಲಲ್ಲಿ ಬಳಸಿರುವ ಇಂಗ್ಲೀಷ್ ಪದಗಳು, ಆ ಪದಗಳನ್ನೇ ತಿರುಚಿ ಹೇಳುವುದರ ಮೂಲಕ ಓದುಗರನ್ನು ನಗೆ ಕಡಲಲ್ಲಿ ಮುಳುಗಿಸುವ ಪ್ರವೃತ್ತಿ.

**ವೈಧಾನಿಕತೆ :**

ಹುಲಗಬಾಳಿಯವರ ಸಮಗ್ರ ಸಾಹಿತ್ಯ ಅಧ್ಯಯನ ಕೈಕೊಳ್ಳಲಾರದೆ. ಅವರ ಹಾಸ್ಯ ಪ್ರಬಂಧಗಳನ್ನು ಮಾತ್ರ ನನ್ನ ಸಂಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ. ವಿವರಣಾತ್ಮಕ ಹಾಗೂ ತೌಲನಿಕ ರೀತಿಯಲ್ಲಿ ಅಧ್ಯಯನದ ವೈಧಾನಿಕತೆಯನ್ನು ನನ್ನ ಸಂಪ್ರಬಂಧಕ್ಕೆ ಅಳವಡಿಸಿಕೊಂಡಿದ್ದೇನೆ.

'ನಗುವುದು ಧರ್ಮ, ನಗಿಸುವದು ಪರಧರ್ಮ' ಎಂಬ ವ್ಯಾಕ್ಯೋಕ್ತಿಯಂತೆ ಹಾಸ್ಯಗಾರ (ಹಾಸ್ಯ ಸಾಹಿತಿ) ತಾನು ನಗಲಾರದೆ ಇನ್ನೊಬ್ಬರನ್ನು ನಗಿಸುವುದರಲ್ಲಿಯೇ ಆತನಿಗೆ ಖುಷಿ, ತೃಪ್ತಿ.

'ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು' ಅಧ್ಯಯನದ ಉದ್ದೇಶ, ಅವುಗಳ ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಗೆ ಪ್ರಥಮ ಅಧ್ಯಾಯವನ್ನು ಮೀಸಲಿರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕನ್ನಡದ ಸಾಹಿತ್ಯ ಲೋಕಕ್ಕೆ ವಿವಿಧ ಹಾಸ್ಯ ಬರಹಗಾರರ ಕೊಡುಗೆ ಚರ್ಚೆಯ ಜೊತೆಗೆ ಹುಲಗಬಾಳಿಯವರ ಪ್ರಬಂಧಗಳಲ್ಲಿ ಹಾಸ್ಯ ಯಾವ ರೀತಿಯಲ್ಲಿ ಒಡಮೂಡಿ ಬಂದಿದೆ ಎಂಬುದನ್ನು ರೇಖಿಸಲಾಗಿದೆ. ಕೇವಲ ಪ್ರಬಂಧ ಅಷ್ಟೇ ಸೀಮೀತಗೊಳಿಸದೆ, ಹರಟೆ, ಹಗುರ ಬರಹಗಳ ಮೂಲಕ ಸುತ್ತ ಮುತ್ತಲಿನ ಘಟನೆ, ಸನ್ನಿವೇಶ, ವ್ಯಕ್ತಿ ಚಿತ್ರಣವನ್ನು ಕಂಡುಕೊಳ್ಳಬಹುದಾಗಿದೆ.

ಮೂರನೆಯ ಅಧ್ಯಾಯ ಸಂಪ್ರಬಂಧದ ಅತಿ ಮುಖ್ಯ ಅಧ್ಯಾಯವಾಗಿದ್ದು, ಅವರ ಒಟ್ಟು ಏಳು ಹಾಸ್ಯ ಪ್ರಬಂಧ ಸಂಕಲನಗಳ ಒಟ್ಟು ಚಿತ್ರಣ ಇಲ್ಲಿ ಕೊಡಲಾಗಿದೆ. ಕನ್ನಡದ ಹಾಸ್ಯ ಸಾಹಿತ್ಯಕ್ಕೆ ಅವರ ಕೊಡುಗೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಹುಲಗಬಾಳಿಯವರು ತಮ್ಮ ಪ್ರಬಂಧ, ಹರಟೆಗಳಿಗೆ ಯಾವ ರೀತಿ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದಾರೆ ಹಾಗೂ ಅದು ಹೇಗೆ ಸೂಕ್ತವಾದುದು ಎಂಬುದನ್ನು ವಿಮರ್ಶಿಸಲಾಗಿದೆ. ಅವರ ಜೊತೆ ಜೊತೆಗೆ ಪ್ರಬಂಧದ ಮುಖ್ಯ ಉದ್ದೇಶದ (ಆಶಯ) ಬಗ್ಗೆ ಕೂಡ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯವು ಪ್ರಬಂಧ ಸಂಕಲನಗಳ ಹಾಗೂ ಹಗುರ ಬರಹಗಳ ಭಾಷೆ ಯಾವ ರೀತಿಯದು ಹಾಗೂ ಪ್ರಬಂಧಕಾರರು ಯಾವ ಶೈಲಿಯಲ್ಲಿ ಪ್ರಬಂಧ ರಚನೆ ಕೈಕೊಂಡಿದ್ದಾರೆ ಎಂಬುದನ್ನು ಉದಾಹರಣೆ ಸಹಿತವಾಗಿ ವಿವರಿಸಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪ/ಫಲಶೃತಿ. ಒಟ್ಟು ಅಧ್ಯಾಯಗಳ ಸಾರವನ್ನು ಇಲ್ಲಿ ಸಾರಾಂಶೀಕರಿಸಲಾಗಿದೆ. ಅದರ ಜೊತೆಗೆ ನಾನು ಆಯ್ದುಕೊಂಡ ಸಂಪ್ರಬಂಧ ಕನ್ನಡದ ಹಾಸ್ಯ ಸಾಹಿತಿಗಳ ಕೊಡುಗೆಯ ಜೊತೆಗೆ ಹುಲಗಬಾಳಿಯವರ ಹಾಸ್ಯ ಪ್ರಬಂಧಗಳನ್ನು ಆಯ್ದುಕೊಂಡು ಅಧ್ಯಯನ ಮಾಡಿ ಹಾಸ್ಯ ಸಾಹಿತ್ಯಕ್ಕೆ ಇವರ ವಿಶಿಷ್ಟ ಕೊಡುಗೆಯನ್ನು ಸಾಹಿತ್ಯ ಲೋಕಕ್ಕೆ ಸಹೃದಯರಿಗೆ ಪರಿಚಯಿಸುವುದಾಗಿದೆ.

* * *

# ಅಧ್ಯಾಯ - ೨

# ಕನ್ನಡ ಹಾಸ್ಯ ಸಾಹಿತ್ಯ ಪರಂಪರೆಯಲ್ಲಿ ಹುಲಗಬಾಳಿ

## ಅಧ್ಯಾಯ – ೨

## ಕನ್ನಡ ಹಾಸ್ಯ ಸಾಹಿತ್ಯ ಪರಂಪರೆಯಲ್ಲಿ ಹುಲಗಬಾಳಿ

**"ಹಾಸ್ಯವಿಲ್ಲದ ಬಾಳು ದೇವರಿಲ್ಲದ ದೇಗುಲದಂತೆ, ದೀಪ್ತಿ ಯಿಲ್ಲದ ದೀವಿಗೆಯಂತೆ, ಕಪ್ಪು ಮೋಡ ತುಂಬಿದ ಜೀವ ನಾಕಾಶದಲ್ಲಿ ಹಾಸ್ಯವು ಬೆಳ್ಳಿಯ ಬೆಳಕು ಬೆಳಗಿದಂತೆ** [೧]

ಅ.ನ.ಕೃ ಅವರು ಹಾಸ್ಯ ಜೀವನದಲ್ಲಿ ದೇವರಿಗೆ, ದೀಪ್ತಿಗೆ ಹಾಗೂ ಕತ್ತಲೆ ತುಂಬಿದ ಜೀವನದಲ್ಲಿ ಬೆಳ್ಳಿಯ ಬೆಳಕಿನಂತೆ ಎಂದು ಹಾಸ್ಯದ ಮಹತ್ವ ಕುರಿತು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಎಲ್ಲ ರಸಗಳ ಸಾರ ಒಂದೇಯಾದರೂ, ಅನುಭವಿಸುವ ರೀತಿ ಬೇರೆ ಬೇರೆ. ಸಿಹಿ ಎನ್ನುವುದು ಒಂದೇ ಆದರೂ ಬೆಲ್ಲದ ಸಿಹಿ, ಸಕ್ಕರೆಯ ಸಿಹಿ, ಕಬ್ಬಿನ ಸಿಹಿ, ಹಾಲಿನ ಸಿಹಿ ಬೆರೆ ಬೇರೆ. ಅದೇ ರೀತಿ ಈ ಎಂಟು ರಸಗಳ ಭಾವ, ವಿಭಾವ, ಅನುಭಾವ ಹಾಗೂ ಸಂಚಾರಿ ಭಾವಗಳು ವಿಭಿನ್ನ

'ಶೃಂಗಾರ ರಸ ರಸಗಳ ರಾಜ' ಎಂದು ಭರತಮುನಿ ಕರೆದಿದ್ದಾನೆ. ಶೃಂಗಾರವನ್ನಾಶ್ರಯಿಸಿ ನಿಂತಿರುವ ಹಾಸ್ಯರಸವು ಎಲ್ಲ ರಸಗಳಲ್ಲಿ ದ್ವಿತಿಯ ಸ್ಥಾನವನ್ನು ಗಳಿಸಿದೆ. ಶೃಂಗಾರರಸದ ನಂತರದ ಸ್ಥಾನ ಹಾಸ್ಯಕ್ಕಿದೆ. ಸಾಮಾನ್ಯವಾಗಿ ವಿಚಾರಿಸಿ ಹೇಳುವುದಾದರೆ ಎಲ್ಲ ರಸಗಳಿಗಿಂತಲೂ ಹಾಸ್ಯರಸ ಜನತೆಗೆ ಹೆಚ್ಚು ಪ್ರಿಯವಾದುದು ಯಾಕೆಂದರೆ ಹಾಸ್ಯರಸದಿಂದದೊಡಗೂಡಿದ ಸಾಹಿತ್ಯವನ್ನು ಜನರು ಪ್ರೀತಿಸುತ್ತಾರೆ. ಭರತಮುನಿ ನಂತರದ ಅಲಂಕಾರಿಕರು ರಸಗಳ ಸಂಖ್ಯೆಯನ್ನು ಹೆಚ್ಚಿಸಿದರು. ಎಷ್ಟೇ ರಸಗಳಿರಲಿ, ಯಾವುದೇ ರಸವಿರಲಿ, ಹಾಸ್ಯ ರಸ ಮಾತ್ರ ಸರ್ವಸಮ್ಮತವಾಗಿದೆಯೆಂದೂ ಅಭಿಪ್ರಾಯಕ್ಕೆಡೆಯಿದೆ.

ರಸಗಳಲ್ಲಿಯೂ ಪರಸ್ಪರವಾಗಿ ಮಿತ್ರತ್ವ–ಶತೃತ್ವವಿದೆ. ಶೃಂಗಾರ–ಹಾಸ್ಯ, ಶೃಂಗಾರ–ವೀರ, ವೀರಾದ್ಭುತಗಳಿಗೆ ಮೈತ್ರಿ ಭಾವವಿದೆ. ಶಾಂತ–ರೌದ್ರಗಳಿಗೂ, ಶಾಂತ–ಶೃಂಗಾರ, ಶೃಂಗಾರ–ಕರುಣಗಳಿಗೆ ವಿರೋಧವಿದೆ. ಈ ರೀತಿ ವಿರುದ್ಧ–ಮಿತ್ರತ್ವ ಭಾವಕ್ಕೆ ಸ್ಥಾಯೀ ಭಾವಗಳ ವಿಭಿನ್ನತೆಯೇ ಕಾರಣವಾಗಿದೆ.

ಹಾಸ್ಯರಸದ ಬಗ್ಗೆ ಸಾಳ್ವನು ಈ ರೀತಿಯಾಗಿ ವ್ಯಾಖ್ಯೆ ನೀಡಿದ್ದಾನೆ. **"ಆಂ ಭೋಗಿ ತಾಂ ದುಃಖಿಯೆಂದು ನಗುವಂದಮಂ ಮಾಳ್ಪುದು ಹಾಸಂ"** [೨]

ಒಂದು ರೀತಿಯಿಂದ ಚಿತ್ತ ವಿಕಾಸವೇ ಹಾಸ್ಯ. ಬಾಹ್ಯ ಪ್ರಪಂಚದಲ್ಲಿರುವ ವಸ್ತು, ಭಾವವನ್ನು ಪ್ರಚೋದನಗೊಳಿಸುವದಕ್ಕೆ ಸಹಾಯಮಾಡುತ್ತದೆ.

---

೧. 'ಸಾಹಿತ್ಯ ಮತ್ತು ಜೀವನ' – ಅ.ನ.ಕೃ ಪುಟ ೯೩

೨. 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' – ಪಿ.ಎಚ್.ಡಿ. ಮಹಾಪ್ರಬಂಧ – ಡಾ. ಎಂ. ಎಸ್. ಸುಂಕಾಪುರ – ಪುಟ ೧೧೪

ಹಾಸ್ಯ ರಸವು ಕೆಲವೊಮ್ಮೆ ರಸಾಭಾಸವಾಗಿ ಪರಿಣಮಿಸಬಹುದಾಗಿದೆ. ಹಾಸ್ಯ ಕವಿ ಮಾನವ ಜೀವನದಲ್ಲಿರುವ ವಿಸಂಗತಿ, ವೈಷಮ್ಯ, ವೈಪರೀತ್ಯಗಳಿಂದ ಹಾಸ್ಯವನ್ನು ಸೃಷ್ಟಿಸಿ ಉದಾತ್ತ ಆನಂದಕ್ಕೆ ಎಡೆಮಾಡಿಕೊಡುತ್ತಾನೆ.

**"ನೈಜತೆ – ಕೃತ್ರಿಮತೆಗಳ ಮಧ್ಯೆ ಹಾಸ್ಯ ಹುಟ್ಟುತ್ತದೆಯೆಂದು"** [೩] **ಥಾಮಸ್ ಹಾರ್ಡಿ** ಹೇಳಿದ್ದಾನೆ. ಹಾಸ್ಯದಿಂದ ನೈತಿಕತೆಯನ್ನು ತಿದ್ದಿಕೊಳ್ಳಲು ಸಾಧ್ಯವಿದೆ. ಹಾಸ್ಯದ ಇನ್ನೊಂದು ಮಗ್ಗಲು ಸತ್ಯ ವಿಷಾದವಿರುತ್ತದೆ. ಬೆಳಗಿನಿಂದ ಸಂಜೆಯ ತನಕ ಮತ್ತು ಬಡತನದಿಂದ ಶ್ರೀಮಂತನಾಗುವ ತನಕ ಸಮಸ್ಯೆಗಳಿದ್ದೇ ಇರುತ್ತವೆ. ಆದರೆ ಹಾಸ್ಯದಿಂದ ಸಮಸ್ಯೆಗಳನ್ನು ಜೀವನದಲ್ಲಿ ಬರುವ ನೋವು ದುಃಖಗಳನ್ನು ಮರೆಯಲು ಸಾಧ್ಯವಿದೆ. ಹಾಸ್ಯ ಜೀವನಕ್ಕೆ ಬೇಕೆ ಬೇಕು. ಆದರೆ ಹಾಸ್ಯದೊಳಗೆ ಪುರಾಣವಾಗಲಿ, ಪ್ರವಚನವಾಗಲಿ ನಡೆಯಲಾರದು. ಗಂಭೀರ ವಿಷಯ ಪ್ರತಿಪಾದನೆಗೆ ಹಾಸ್ಯದ ಉದಾಹರಣೆ ನೀಡಿ ಸುಲಭ ಸರಳವಾಗಿ ವಿವರಿಸಬಹುದು. ಹಾಸ್ಯದಿಂದ ನಗು ಉತ್ಪತ್ತಿಯಾಗುತ್ತದೆ ಮಾನವನು ತನ್ನ ನಿತ್ಯ ಬದುಕಿನಲ್ಲಿ ನಗು ನಗುತ್ತಲೇ ಇರಬೇಕು, ಅದು ತುಟಿ ಬಿಚ್ಚಿ, ಹಲ್ಲು ಕಚ್ಚಿ, ಹಲ್ಲು ತೆಗೆದು, ಹಲ್ಲು ಬಿಟ್ಟು ಅಂದರೆ ಮನಸ್ಸು ಬಿಚ್ಚಿ ನಗಬೇಕು, ಕಣ್ಣಾಗ ನೀರು ಬರುವ ಹಾಗೆ ನಗಬೇಕೆಂದು ಹಿರಿಯರು ಹೇಳಿರುವರು. ಅಂದರೆ ನಗುವುದರಿಂದ ಕಾಯಿಲೆಗಳು ನಿವಾರಣೆಯಾಗಿ ಆರೋಗ್ಯದಿಂದ ಬಾಳಲು ಸಾಧ್ಯವಾಗುತ್ತದೆ.

ಜೀವನದೊಳಗೆ ಬರುವ ಹಾಸ್ಯ ಪ್ರಸಂಗಗಳು ನಾಲ್ಕು, ಅವು –

೧) **ತಿಳಿಹಾಸ್ಯ**

೨) **ಅಪಹಾಸ್ಯ**

೩) **ಪರಿಹಾಸ್ಯ**

೪) **ವಿಡಂಬನೆ**

'ಹಾಸ್ಯದ ಅಧಿದೇವತೆ ಗಣಪತಿ'. ಆತನ ಸ್ತುತಿ ಮಾಡ್ತಿವಿ ಅದು ಈ ರೀತಿಯಿದೆ– 'ಆನೆಯ ಸೊಂಡಿಲದವನೆ, ಮೂಷಕ ವಾಹನನೆ, ಮೋದಕ ಪ್ರಿಯನೆ, ಮೊರದಂತಹ ಕಿವಿಯುಳ್ಳವನೇ, ಡುಮ್ಮ ಹೊಟ್ಟೆಯವನೇ, ಲಂಬೋಧರನೆ – ಇಂಥ ಅಪಹಾಸ್ಯದ ಮೂರ್ತಿ ಆ ಗಣಪತಿ. ಆತನನ್ನು ಹೀಂಗ್, ಅಂದು ಸ್ತುತಿ ಮಾಡ್ತೀವಿ. ಇಮು ಹಾಸ್ಯದ ಒಳಮುಗುಳಿನ ಪ್ರಾರ್ಥನೆಯಾಗಿದೆ. ಪ್ರೀತಿಯಿಂದ ಬೈದರೆ ದೇವರು ಒಲಿಯುತ್ತಾನೆಯೆಂಬ ಬಲವಾದ ನಂಬುಗೆಯುಂಟು. ಇಂಥ ಹಾಸ್ಯ ಪ್ರಸಂಗಗಳು ಜೀವನದಲ್ಲಿ ನಡೆಯುತ್ತಿರಬೇಕು. ಅಂದಾಗ ಮನುಷ್ಯನ ಆರೋಗ್ಯ ವೃದ್ಧಿಸುತ್ತದೆಯೆಂದಿದ್ದಾರೆ ಅನುಭಾವಿಗಳು.

ಹಾಸ್ಯಾನುಭವದಿಂದಾದ ಆನಂದವು ಮುಖವರಳಲು ನಗೆಯ ರೂಪದಲ್ಲಿ ವ್ಯಕ್ತವಾಗುತ್ತದೆ. ನಗೆ, ಹಾಸ್ಯ ಇವೆರಡೂ ಚಿತ್ತವೃತ್ತಿಗೆ ಸಂಬಂಧ ಪಟ್ಟವು. 'ಹಾಸ' ಭಾವಭಾವವಾಗಿಯೇ ಉಳಿದರೆ ನಗೆಯಾಗಿ ಪರಿಣಮಿಸುತ್ತದೆ. ಆ ಭಾವವು ರಸವಾದರೆ 'ಹಾಸ'ವೆನಿಸಿಕೊಳ್ಳುತ್ತದೆ. ಹಾಸ್ಯವು ಚಿತ್ತವೃತ್ತಿಯಲ್ಲಿ ಮೂಡುವುದರಿಂದ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ನಗೆ ಮಾತ್ರ ಮುಖದಲ್ಲಿ ಅರಳಿ ಕಣ್ಣಿಗೆ ಕಾಣಿಸುವುದು.

---

೩. 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' – ಪಿ.ಎಚ್.ಡಿ. ಮಹಾಪ್ರಬಂಧ – ಡಾ. ಎಂ. ಎಸ್. ಸುಂಕಾಪುರ ಪುಟ – ೧೧೪

ಒಂದು ಅಂತರ್ಮುಖಿಯಾದರೆ, ಇನ್ನೊಂದು ಬಹಿರ್ಮುಖಿ. ಅಂತರಂಗದಲ್ಲಿರುವ ಹಾಸ್ಯದ ಶಕ್ತಿಯನ್ನು ಅರಿಯುವುದಕ್ಕೆ ಮುಖದಲ್ಲಿ ಮೂಡುವ ನಗೆಯೇ ನಿದರ್ಶನ. ಒಂದು ರೀತಿಯಿಂದ ಮುಖದಲ್ಲಿರುವ ನಗೆ ಚಿತ್ತದಲ್ಲಿ ಉಂಟಾದ ಹಾಸ್ಯವನ್ನು ಬಹಿರಂಗಪಡಿಸುವ ಸಾಧನ. ನಗೆಯನ್ನು ಕುರಿತು ಅಲಂಕಾರಿಕರು ಸಾಕಷ್ಟು ವಿಚಾರ ಮಾಡಿದ್ದಾರೆ. **'ನಗುವೇ ಹಾಸ್ಯದ ತಾಯಿಯಿದ್ದಂತೆ'**.

**ಭರತಮುನಿಯ ಪ್ರಕಾರ – ನಗೆ ಎರಡು ವಿಧವೆಂದು.**

**೧) ಆತ್ಮಸ್ಥ ಇನ್ನೊಂದು ೨) ಪರಸ್ಥ**

ಮುಂದೆ ಬರುವ ಅಲಂಕಾರಕರು ಭರತಮುನಿಯ ಅಭಿಪ್ರಾಯವನ್ನೇ ಅನುಸರಿಸಿದ್ದಾರೆ.

**ಭರತಮುನಿ ಹಾಸ್ಯವನ್ನು (ನಗೆ) ಆರು ವಿಧವಾಗಿ ವಿಂಗಡಿಸಿರುವನು.**

ಅವು ಈ ಕೆಳಗಿನಂತಿವೆ. ಸಂಸ್ಕೃತ ಸಂವಾದಿಯಾಗಿ ಕನ್ನಡ ಪದಗಳನ್ನು ಹೀಗೆ ಹೇಳಬಹುದು.

| | ಸಂಸ್ಕೃತ ಪದಗಳು | | ಕನ್ನಡ ಪದಗಳು |
|---|---|---|---|
| ೧) | ಸ್ಥಿತ | – | ಮುಗುಳು ನಗೆ |
| ೨) | ಹಸಿತ | – | ಅರಳು ನಗೆ |
| ೩) | ವಿಹಸಿತ | – | ತುಂಬು ನಗೆ |
| ೪) | ಉಪಹಸಿತ | – | ಬಿರು ನಗೆ |
| ೫) | ಅಪಹಸಿತ | – | ಹುಚ್ಚು ನಗೆ |
| ೬) | ಅತಿಹಸಿತ | – | ಹುಚ್ಚಾಚ್ಚಾರ ನಗೆ |

**ಆತ್ಮಸ್ಥ** ನಗೆಯು ವಿಪರೀತ ಅಲಂಕಾರ ಮಾಡಿಕೊಂಡ ಶಿವನಲ್ಲಿ ಕಾಣಬಹುದಾಗಿದೆ. ಪರಸ್ಥ ನಗೆಯು ವಿಕೃತ ಬಣ್ಣ ಲೇಪನ, ವೇಷಭೂಷಣ ವಿಕೃತ ನುಡಿ ಅಂಗವಿಕಾರಗಳಿಂದ ಕೂಡಿ ಅನ್ಯರನ್ನು ನಗಿಸುವುದಾಗಿದೆ.

ಉದಾ : **ತೆನಾಲಿರಾಮಕೃಷ್ಣನ ವೇಷಭೂಷಣ.**

ಸ್ಥಿತ ನಗು – **'ಹೂವಿನಂತೆ ಅರಳುತ್ತದೆ'**, ಹಸಿತ ನಗು – **'ಮೊಗ್ಗುಬಿರಿದಂತೆ'** ವಿಹಸಿತ – **'ನಕ್ಕಾಗ ಮೃದುವಾಗಿ ಧ್ವನಿ'** ಉತ್ಪತ್ತಿಯಾಗುತ್ತದೆ. ಉಪಹಸಿತ – **'ಅರೆಬಿರಿದ ಮಲ್ಲಿಗೆಯಂತೆ'** ಇದರ ರೂಪ ವಿಹಸಿತದಲ್ಲಿ – **'ಮೃದುವಾದ ವೀಣಾ ಸ್ವರದಂತೆ ನಗೆಯಲ್ಲಿ'** ಧ್ವನಿಯುಂಟಾಗುತ್ತದೆ. ಉಪಹಸಿತ – **'ಅತಿಹಸಿತ ನಗೆಗಳು ಅಧಮ ಪ್ರಕೃತಿಯವರಲ್ಲಿ'** ಉತ್ಪತ್ತಿಯಾಗುತ್ತವೆ. ಸಭೆಯಲ್ಲಿ ವಿದೂಷಕ ಜನರನ್ನು ನಗಿಸುವುದು ಅಪಹಸಿತಕ್ಕೆ ಉದಾಹರಣೆಯಾಗಿ ನಾವು ತೆಗೆದುಕೊಳ್ಳಬಹುದಾಗಿದೆ. ಅತಿಹಸಿತ – **'ನಗುವವನು ಬಿದ್ದು ಬಿದ್ದು'** ನಗುತ್ತಾನೆ. ನಗೆಯ ಸ್ವರ ದಿಗಂತವನ್ನೇ ವ್ಯಾಪಿಸುತ್ತದೆ. ಇದು ಅನ್ಯರು ಸಂಕಷ್ಟದಲ್ಲಿದ್ದಾಗ, ಅವರಿಗೆ ದುಃಖವಾದಾಗ ನೋಡಿ ಅಪಹಾಸ್ಯ ಮಾಡಿ ನಗುವುದಾಗಿದೆ. ಹೀಗೆ ನಗೆಯಲ್ಲಿ ಆತ್ಮಸ್ಥದಲ್ಲಿ ಆರು ವಿಧ, ಪರಸ್ಥದಲ್ಲಿ ಆರುತೆರ ಒಟ್ಟು ಹನ್ನೆರಡು ಬಗೆಯೆಂದು (ವಿಧ) ಭರತಾದಿಗಳ ಮತ.

ನಗೆಯು ಶಾರೀರಿಕ ಕ್ರಿಯೆಗಳಿಂದ ಉಂಟಾಗುತ್ತದೆ. ನಗೆ ತೂರೆಯ ಮೇಲಣ ತೆರೆಗಳಂತೆ ನರ್ತಿಸುತ್ತಾ ಬರುತ್ತದೆ. ಅದು ತೆರೆಗಳಂತೆ ಮೊತ್ತದಲ್ಲಿ ಹೇರು–ಪೇರು (ಎತ್ತರ–ಕಿರಿದು), ಎತ್ತರದಲ್ಲಿ ಹಿರಿದಾಗಿ ಕಿರಿಯದರಲ್ಲಿ ಧ್ವನಿ ಕುಗ್ಗುವುದು. ನಗೆ ಮೂಡಿದಲ್ಲಿಯೇ **'ಮಾಯೆ ಬೀರುವ ಮೋಹಿನಿಯಂತೆ'**. ಅದು ಚಿತ್ತವೃತ್ತಿಗೆ ಸಂಬಂಧಪಟ್ಟುದರಿಂದ ಒಬ್ಬನಿಗೆ ಸ್ಮಿತವೆನಿಸಿದರೆ, ಇನ್ನೊಬ್ಬನಿಗೆ ಅಪಹಸಿತ ಎನಿಸಬಹುದು. ಅದನ್ನು ವಿಭಾಗಿಸುವುದು ಕಷ್ಟದ ಕೆಲಸ (ಕಷ್ಟಕರ ಕಾರ್ಯ).

ಮನಸ್ಸಿನ ಸಮಾಧಾನಕ್ಕಾಗಿ, ಅಭ್ಯಾಸದ ಅನುಕೂಲಕ್ಕಾಗಿ ಹಾಸ್ಯ ವಿಭಜನೆ ಮಾಡಬೇಕೇ ಹೊರತು ಮತ್ತೇತಕ್ಕೂ ಅಲ್ಲ. ಹಾಸ್ಯ ರಸವನ್ನು ಅನುಭವಿಸುವಾಗ ಶರೀರದಲ್ಲಿ ಉಂಟಾಗುವ ವೈಪರೀತ್ಯಗಳೇ ನಗೆಯ ಪ್ರಕಾರಗಳು. ನಗೆ ಹಾಸ್ಯದ ಹೊರನೋಟವೇ ಹೊರತು ಒಳರಹಸ್ಯವಾಗಲಾರದು. ಅಂದರೆ **ಹಾಸ್ಯದ ಒಳಮುಗುಳು ಆನಂದ.**

ಹಾಸ್ಯದ ಬಗ್ಗೆ ಭರತಮುನಿಯ ಅಭಿಪ್ರಾಯವನ್ನೆ ಇಲ್ಲಿಯ ವರೆಗೆ ಹಾಗೂ ಕನ್ನಡ ಪಂಡಿತರೂ ಒಪ್ಪಿಕೊಂಡಿದ್ದಾರೆ. ಈ ಎಲ್ಲ ನಗೆಯ ಪ್ರಕಾರಗಳನ್ನು ತಿಳಿದುಕೊಂಡಾಗ ನಾವು ಪ್ರಪಂಚವೇ ನಗೆಯಲ್ಲಿ ಮುಳುಗಿ ಹೋಗುವುದೆಂದು ಭಾವಿಸುತ್ತೇವೆ. ಆದರೆ ಅವು ಕೇವಲ ನಗೆಯ ಆಕಾರ, ಅಳತೆಗಳನ್ನು ಸೂಚಿಸುತ್ತವೆ ಹೊರತು ಆಯಾ ನಗೆಯಲ್ಲಿರುವ ಸತ್ವವನ್ನು ಹೊರಹೊಮ್ಮಿಸುವುದಿಲ್ಲ. ಮೊತ್ತಕ್ಕಿಂತ ಸತ್ವ ಮುಖ್ಯ. ಕನ್ನಡ ಕವಿಗಳು ತಮ್ಮಲ್ಲಿ ವಿವಿಧ ನಗೆಯ ವಿಧಗಳನ್ನು ಆಗಾಗ ಸಂದರ್ಭಕ್ಕೆ ಅನುಸಾರವಾಗಿ ಕಾವ್ಯದಲ್ಲಿ ಉಲ್ಲೇಖಿಸಿರುವರು.

ಕನ್ನಡದಲ್ಲಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕವಿಗಳು ಆಗಾಗ ಹಾಸ್ಯದ (ನಗುವಿನ) ಬಗ್ಗೆ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರುವರು. ಚಂಪೂ, ಷಟ್ಪದಿ, ವಚನ, ತ್ರಿಪದಿ ಹಾಗೂ ಜನಪದ ಹಾಡುಗಳಲ್ಲಿ (ಒಗಟು, ಗಾದೆಗಳಲ್ಲಿಯೂ ಕೂಡ) ಹಾಸ್ಯದ ಬಗ್ಗೆ ಬಂದಿರುವ ಪದ್ಯಗಳನ್ನು ನೋಡಬಹುದಾಗಿದೆ. ಹೊಸಗನ್ನಡ ಕವಿಗಳ ಮೇಲೆ ಆಂಗ್ಲ ಸಾಹಿತ್ಯ, ಆಂಗ್ಲ ಸಾಹಿತಿಗಳ ಪ್ರಭಾವ ಸಾಕಷ್ಟಾಗಿದೆ. **"Practical Joke"** ಎನ್ನುವುದು. ನಮ್ಮ ಕವನ, ಕಥೆ, ಕಾದಂಬರಿ ಹಾಗೂ ಪ್ರಬಂಧ ಸಾಹಿತ್ಯದ ಮೇಲೆ ಅತಿಯಾದ ಪ್ರಭಾವ ಬೀರಿದೆ. ನಮ್ಮ ಭಾರತೀಯರಲ್ಲಿ ಹಾಸ್ಯ ಪ್ರವೃತ್ತಿ ಇದ್ದಿಲ್ಲ ಎಂತಲ್ಲ, ಮೂಲತಃ ನಮ್ಮ ಸಾಹಿತ್ಯ ಕೃತಿಗಳಾದ ಪಂಚತಂತ್ರ, ಜೈನಪುರಾಣ, ತೆನಾಲಿರಾಮಕೃಷ್ಣ, ಅಕ್ಬರ–ಬೀರಬಲ್ ಕಥೆಗಳಲ್ಲಿ ಕಾಣಬಹುದಾಗಿದೆ. ಹಾಸ್ಯದ ಜೊತೆಗೆ ನೀತಿಯೂ ಅಲ್ಲಿ ಅಡಗಿದೆ.

ಭರತನು ಹೇಳುವಂತೆ **'ನಗೆಯೂ ಬೆಳ್ಳಗೆ, ಹಾಸ್ಯವೂ ಬೆಳ್ಳಗೆ'** ಹಾಸ್ಯವು ಬೆಳ್ಳಗೆಂದು ಹೇಳುವಲ್ಲಿ ಅಲಂಕಾರಿಕರಲ್ಲಿ ಒಮ್ಮತವಿದೆ. ಹಾಸ್ಯಕ್ಕೆ ಅಧಿದೇವತೆ ಗಣಪತಿ, **'ಹಾಸ್ಯಕ್ಕಧೀಶಂ ಗಜಾಸ್ಯಂ'** – ಎಂಬುದು ಸಾಳ್ವನ ಹೇಳಿಕೆ. ಇಷ್ಟೊಂದು ಶುಭ್ರವಾದ ಹಾಸ್ಯವು ಚೇತೋವಿಕಾಸವಾಗಿ ಆಯುರಾರೋಗ್ಯ ಸಂಪತ್ತನ್ನು ಹೆಚ್ಚಿಸುತ್ತದೆ. ಶೃಂಗಾರದೊಂದಿಗೆ ಹಾಸ್ಯ ಕೂಡಿ ಬಂದರೆ ಸ್ವರ್ಗಕ್ಕೆ ಮೂರೇ ಗೇಣು. ಕರುಣೆ–ಭಯಾನಕ ರಸಗಳಿದ್ದಲ್ಲಿ ಮಾತ್ರ ಹಾಸ್ಯಕ್ಕೆ ಸ್ಥಾನವಿಲ್ಲ. ಹಾಸ್ಯದ ಬಗ್ಗೆ ಪ್ರಾಚೀನ ಹೇಳಿಕೆಯನ್ನು ಒಪ್ಪಿ ಮುಂದುವರಿಸದೇ ಆಧುನಿಕರು ಕೂಡ ತಮ್ಮದೇ ಅಭಿಪ್ರಾಯವನ್ನು ನೀಡಬೇಕಾಗಿದುದು ಅಗತ್ಯವಾಗಿದೆ. ಹಾಸ್ಯದ ಬಗ್ಗೆ ನಾಟಕದಲ್ಲಿ ಬರುವ ಹಾಸ್ಯ ಪಾತ್ರಗಳು ಸೃಷ್ಟಿಯಾಗಿವೆ. **'ಸಂಸ್ಕೃತ ಸಾಹಿತ್ಯದಲ್ಲಿ ಹಾಸ್ಯ'** ಎನ್ನುವ ಕೃತಿಯಲ್ಲಿ – **"ಪ್ರಹಸನ"**ದಲ್ಲಿ ಮಾತ್ರ ಅತಿ ಹೆಚ್ಚಿನ ಪ್ರಮಾಣ (ರೀತಿ)

ದಲ್ಲಿ ಹಾಸ್ಯವನ್ನು ಕಂಡುಕೊಳ್ಳಬಹುದಾಗಿದೆ. **ಭಾರವಿ, ಕಾಳಿದಾಸ, ಬಾಣ, ಭಾಸ** ಎಲ್ಲ ಸಂಸ್ಕೃತ ಕವಿ, ನಾಟಕಕಾರರ ಕೃತಿಗಳಲ್ಲಿ ಹಾಸ್ಯ ಅತಿ ಸೊಗಸಾಗಿ ಮೂಡಿ ಬಂದಿದೆ.

ಪಾಶ್ಚಾತ್ಯರ ಆಡಳಿತ ಪ್ರಭಾವ ನಮ್ಮ ಭಾರತೀಯರ ಮೇಲೆ ಉಂಟಾದಂತೆ, ಇಂಗ್ಲೀಷ ಭಾಷೆಯ ಪ್ರಭಾವ ಶಿಕ್ಷಣದಿಂದ ನಮ್ಮ ಭಾರತೀಯರ ಮೇಲೆ ಉಂಟಾದಂತೆ, ಇಂಗ್ಲೀಷ ಬಾಷೆಯ ಪ್ರಭಾವ, ಶಿಕ್ಷಣದಿಂದ ನಮ್ಮ ಭಾರತೀಯ ಸಾಹಿತಿಗಳ ಮೇಲೆ ಕಾವ್ಯ, ಕಾದಂಬರಿ, ಕವನ, ಹರಟೆ, ಪ್ರಬಂಧ, ಸಾಹಿತ್ಯದ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರದೆ ಇರಲಾರದು.

ಪ್ರಪ್ರಥಮವಾಗಿ ಬಂಗಾಳಿ ಭಾಷೆಯಲ್ಲಿ ಪ್ರಬಂಧ ಸಾಹಿತ್ಯ ಹುಟ್ಟಿಕೊಂಡಿತು. ಅದರಂತೆ ಕನ್ನಡ ಸಾಹಿತ್ಯದ ಮೇಲೂ ತನ್ನದೇ ಪ್ರಭಾವ ಬೀರಿತು. **"ಲೋಕ ರಹಸ್ಯ"** ಎಂಬ ಪ್ರಬಂಧ ಬಂಗಾಳಿಯಿಂದ ಕನ್ನಡಕ್ಕೆ ಅನುವಾದಗೊಂಡ ಪ್ರಥಮ ಕೃತಿಯಾಗಿದೆ. ಬಿ. ಆರ್. ವೆಂಕಟಾಚಲ ಅವರ **'ದಾಡಿಯ ಹೇಳಿಕೆ'** ಸ್ವತಂತ್ರ ಪ್ರಬಂಧ ಸಂಕಲನ. ನಂತರ ವಿ. ಸೀ. ಯವರ **'ಪಂಪಾಯಾತ್ರೆ'** ೧೯೨೯ರಲ್ಲಿ, ೧೯೩೦ ರಲ್ಲಿ ಎಂ. ಜಿ. ವೆಂಕಟೇಶಯ್ಯನವರ **'ಮಲ್ಲಯ್ಯನ ಪ್ರಬಂಧಗಳು'** ನಂತರದಲ್ಲಿ ಬೇಂದ್ರೆ, ಕುವೆಂಪು, ಮಧುರಚೆನ್ನ, ವಿ. ಕೃ ಗೋಕಾಕ, ಮುಗಳಿಯವರಂತಹ ಪ್ರಸಿದ್ಧ ಸಾಹಿತಿಗಳು ಪ್ರಬಂಧಗಳನ್ನು ರಚಿಸಿದರು.

**ಪ್ರೊ – ಮಳಲಿ ವಸಂತ ಕುಮಾರ ತಮ್ಮ 'ಪ್ರಬಂಧ ಸಾಹಿತ್ಯ'** ಎಂಬ ಗ್ರಂಥದಲ್ಲಿ – ಪ್ರಥಮ ಪ್ರಬಂಧಗಳ ಬಗ್ಗೆ ಉಲ್ಲೇಖಿಸಿರುವರು. ಅವುಗಳೆಂದರೆ – ಎಂ. ಎಸ್. ಶ್ರೀನಿವಾಸರಾಯರ **'ಭ್ರಮರ ಮತ್ತು ಮೋಡ'** ಪಂಜೆ ಮಂಗೇಶರಾಯರ **'ಹಲ್ಲಿ ಮತ್ತು ಬಂದಣಿಗೆ'** ಎಂದು.

ಪ್ರಪ್ರಥಮವಾಗಿ ನಾವು ಹಾಸ್ಯ ಪ್ರಬಂಧಗಳು ಯಾವಾಗ ಪ್ರಕಟಗೊಂಡವು ಎಂಬುವುದುನ್ನು ತಿಳಿಯುವುದು ಸೂಕ್ತವಾಗಿದೆ. ಪ್ರಥಮ ಹಾಸ್ಯ ಪ್ರಬಂಧ ಪ್ರಕಟಗೊಂಡದ್ದು ಕ್ರಿ. ಶ. ೧೯೩೪ ರಲ್ಲಿ ಒಟ್ಟು ೨೯ ಪ್ರಬಂಧಗಳ ಸಂಕಲನ **"ಹರಟೆಗಳು ಮತ್ತು ಸುಳುವು ಹೊಳವು"** ಎಂಬ ಕೃತಿಯಾಗಿದೆ.

ಹಾಸ್ಯ ಪ್ರಬಂಧಕಾರರಲ್ಲಿ ಪ್ರಮುಖರಾದವರು ನಾ. ಕಸ್ತೂರಿ, ಎ. ಎನ್. ಮೂರ್ತಿರಾಯರು, ವೀ. ಸಿ., ಬೇಂದ್ರೇ, ಗೊರೂರು, ಬೀಚಿ, ಲಾಂಗೂಲಾಚಾರ್ಯ, ಡಾ. ಎಂ. ಎಸ್. ಸುಂಕಾಪುರ ಅವರನ್ನು ನೆನೆಯದಿದ್ದರೆ ಅಪೂರ್ಣವೆನಿಸುವುದು. ಅವರು ಹಾಸ್ಯದ ಬಗ್ಗೆ ಪ್ರಾಚೀನದಿಂದ ಆಧುನಿಕ ಕನ್ನಡ ಸಾಹಿತ್ಯದ ವರೆಗೆ ಅಧ್ಯಯನ ಕೈಕೊಂಡು **'ಕನ್ನಡ ಸಾಹಿತ್ಯದಲ್ಲಿ ಹಾಸ್ಯ'** ಎಂಬ ಸಂಶೋಧನಾತ್ಮಕ ಕೃತಿಯನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಅಂದರೆ **'ಹಾಸ್ಯ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವ ಹಾಗೂ ಕೈಗನ್ನಡಿಯಂತಾಗಿದೆ'**.

**"ಸುಂಕಾಪುರ ಎಂದರೆ ಹಾಸ್ಯ ಹಾಸ್ಯವೆಂದರೆ** ಸುಂಕಾಪುರ ಎನ್ನವಷ್ಟರ ಮಟ್ಟಿಗೆ" ಅವರ ಬದುಕಿನಲ್ಲಿ ಜಾಯಮಾನ ಕೂಡ ಹಾಸ್ಯದಿಂದ ಕೂಡಿದ್ದು ಆಗಿದೆ.

ಹಾಸ್ಯ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಅತ್ಯಲ್ಪ. ಪ್ರಸಿದ್ಧ ಹಾಸ್ಯ ಮಹಿಳಾ ಸಾಹಿತಿಗಳು. ಟಿ. ಸುನಂದಮ್ಮ, ಸುನಂದಾ ಬೆಳಗಾಂವಕಾರ, ಜ್ಯೋತ್ಸ್ನಾ ಕಾಮತ್, ಭುವನೇಶ್ವರಿ ಹೆಗಡೆ, ಗುರುದೇವಿ ಹುಲೆಪ್ಪನವರಮಠ ಅವರನ್ನು ಇಲ್ಲಿ ನಾವು ಸ್ಮರಿಸಬಹುದಾಗಿದೆ.

ಹಾಸ್ಯ ಪ್ರಬಂಧ ಸಾಹಿತ್ಯವನ್ನು ನಾವು ಅಧ್ಯಯನಕ್ಕೆ ಒಳಪಡಿಸಿದಾಗ ಈ ಮೇಲೆ ಉಲ್ಲೇಖಿಸಿದ ಎಲ್ಲ ಹಿರಿ ಕಿರಿಯ ಸಾಹಿತಿಗಳು ಕನ್ನಡ ಹಾಸ್ಯ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಸೇವೆ, ಕೊಡುಗೆ ನೀಡಿದ್ದಾರೆ. ಅಂಥವರ ಸಾಲಿನಲ್ಲಿ ನಿಲ್ಲತಕ್ಕವರು ಬಯಲು ಸೀಮೆಯ ಬಾಗಲಕೋಟೆಯ ಜಿಲ್ಲೆಯ ಜಮಖಂಡಿ ತಾಲೂಕಿನ ಬನಹಟ್ಟಿ ಪಟ್ಟಣದ ಮಲ್ಲಿಕಾರ್ಜುನ ಹುಲಗಬಾಳಿಯವರು ಹಾಸ್ಯ ಪ್ರಬಂಧಗಳ ರಚನೆ ಮೂಲಕ ನನ್ನನ್ನು ಗಮನಸೆಳೆದ ಸೂಕ್ಷ್ಮ ಪ್ರವೃತ್ತಿಯ, ಸರಳ ವ್ಯಕ್ತಿತ್ವದ, ಹಾಸ್ಯ ಮಿಶ್ರಿತ, ಭಾಷೆಯಿಂದ ಕೂಡಿದ ಅವರ ಪ್ರಬಂಧಗಳು ನನ್ನನ್ನು ಸಂಶೋಧನಾ ಪ್ರವೃತ್ತಿಗೆ ಪ್ರೇರೇಪಣೆಗೊಳಿಸಿದವು. ಇವರು ಒಟ್ಟು ಏಳು ಹಾಸ್ಯ ಪ್ರಬಂಧಗಳನ್ನು ಕನ್ನಡ ಹಾಸ್ಯ ಸಾಹಿತ್ಯಕ್ಕೆ (ಲೋಕಕ್ಕೆ) ಅರ್ಪಣೆ ಮಾಡಿರುವರು. ನನ್ನ ಸಂಪ್ರಬಂಧ ಅವರ ಹಾಸ್ಯ ಪ್ರಭಂಧಗಳು ಇನ್ನೂವರೆಗೆ ವಿಮರ್ಶೆಯ ಪರಿಧಿಗೆ ಒಳಪಟ್ಟಿಲ್ಲ. ಅದರ ಜೊತೆಗೆ ಅವರು ರಚಿಸಿದ ಹಾಸ್ಯ ಪ್ರಬಂಧಗಳ ಹೂರಣವನ್ನು ವಿಮರ್ಶಾಲೋಕಕ್ಕೆ ಪರಿಚಯಿಸುವುದರ ಜೊತೆಗೆ ವಿವಿಧ ಪ್ರಬಂಧಕಾರರು ಹಾಗೂ ಇವರ ಮಧ್ಯ ಎಂಥ ವ್ಯತ್ಯಾಸ ಹಾಗೂ ಅಂತರಗಳಿವೆ ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸುವದಾಗಿದೆ.

* * *

## ಅಧ್ಯಾಯ – ೩

## ಹುಲಗಬಾಳಿಯವರ ಹಾಸ್ಯ ಪ್ರಬಂಧಗಳ ಸ್ವರೂಪ

**"ನಗೆ ಬೆಲ್ಲಕ್ಕಿಂತ ಸಿಹಿ, ಅಳು ಬೇವಿಗಿಂತ ಕಹಿ**
**ಎರಡು ಕಲೆತರೆ ಮಾತ್ರ ಆಸ್ವಾದಿತ :**
**ಅತಿರೇಕ ನಗೆ ಮದವು, ಮಿತಿಮೀರಿದ ಅಳು ವಿಷವು**
**ಅಳು ನಗೆಯ ಸಮರಸವೇ ಹರುಷಾಮೃತ"** [೧]

ಜೀವನದಲ್ಲಿ ನಗು–ಅಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಜೀವನದಲ್ಲಿ ಸುಖಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದೆ ಇರುವವನು, ಎಂಥ ಪ್ರಸಂಗ ಬಂದರೂ ಎದುರಿಸುವನು ಬೇಂದ್ರೆಯವರು – 'ಸುಖ ಸುಗ್ಗಿಯಂತೆ ಬರುವುದು, ದುಃಖ ಗುಳಿತ್ತಿ ಬರುವುದು' ಎಂದು ಅಭಿಪ್ರಾಯ ವ್ಯಕ್ತಪಡಿಸಿರುವರು.

ಮನುಷ್ಯ ಸುಖದಿಂದ ಬದುಕಬೇಕಾದರೆ ಆತನ ಮನಸ್ಸು ಸಮಸ್ಥಿತಿಯಲ್ಲಿರಬೇಕು. ಸುಖ–ದುಃಖ, ನಗು–ಅಳು ಇದ್ದಾಗ ಮಾತ್ರ ಜೀವನಕ್ಕೊಂದು ಬೆಲೆ ಸಿಗುವುದು.

ಪ್ರಬಂಧ ಸಾಹಿತ್ಯ ಗದ್ಯ ಸ್ವರೂಪವಾಗಿದ್ದು, ಗದ್ಯದಲ್ಲಿ ಲೇಖಕರು ತಮ್ಮ ವಿಚಾರ, ಆಲೋಚನೆ, ಚಿಂತನೆಗಳನ್ನು ಗಂಭೀರವಾಗಿ ಹಾಗೂ ಹಾಸ್ಯ ರೀತಿಯಲ್ಲಿಯೂ ವ್ಯಕ್ತಪಡಿಸಬಹುದಾಗಿದೆ. ಪ್ರಬಂಧ ಸಾಹಿತ್ಯ ಪಾಶ್ಚಾತ್ಯರ ಬಳುವಳಿ, ಪಾಶ್ಚಾತ್ಯರು ತಮ್ಮ ಭಾಷೆ, ಸಾಹಿತ್ಯದಿಂದ ಭಾರತೀಯರನ್ನು ಜಗತ್ತಿನ ಜ್ಞಾನ ಭಂಡಾರದ ಕಡೆಗೆ ವಾಲುವಂತೆ ಪ್ರೇರೇಪಣೆ ನೀಡಿದರು.

ಪ್ರಬಂಧ ಸಾಹಿತ್ಯದ ಪ್ರಭಾವ ಮೊಟ್ಟಮೊದಲು ಪ್ರಪ್ರಥಮವಾಗಿ ಬಂಗಾಳಿ ಭಾಷೆಯ ಮೇಲಾಯಿತು. ನಂತರ ಭಾರತೀಯ ಇತರ ಭಾಷೆಗಳ ಮೇಲೂ ತನ್ನ ಪ್ರಭಾವ ಬೀರಿದೆ ಇರಲಿಲ್ಲ. ನಮ್ಮ ಕನ್ನಡ ಪ್ರಸಿದ್ಧ ನಾಟಕಕಾರರಾದ ಟಿ. ಪಿ. ಕೈಲಾಸಂ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ನಾ. ಕಸ್ತೂರಿ, ಗೋಕಾಕ, ರಾ. ಶಿ. ಬೇಂದ್ರೆ, ಕುವೆಂಪು ಎಲ್ಲರೂ ಪ್ರಬಂಧ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆ ಸಲ್ಲಿಸಿರುವರು.

ಪ್ರಬಂಧ ಪದವು ಇಂಗ್ಲೀಷಿನ 'ಎಸ್ಸೆ' (Essay) ಪದದಿಂದ ಬಂದದ್ದು. ಇಂಗ್ಲೀಷಿನಲ್ಲಿ ಮಾಂಟೇನ್‌ನಿಂದ ಪ್ರಬಂಧ ರಚನೆ ಪ್ರಾರಂಭವಾಯಿತು. ಹದಿನೆಂಟನೆಯ ಶತಮಾನದ ಕೊನೆಗೆ ನಮ್ಮ ಭಾರತದೇಶದಲ್ಲಿ ಇಂಗ್ಲೀಷ ಪ್ರಭಾವ ಎಷ್ಟಾಯಿತೆಂದರೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಶಿಕ್ಷಣರಂಗದಲ್ಲಿ ಬದಲಾವಣೆವುಂಟಾಯಿತು.

---

೧. 'ಬ. ಗಿ. ಯಲ್ಲಟ್ಟಿ : ಸಮಗ್ರ ಸಾಹಿತ್ಯ' – ಡಾ. ಆರ್. ಬಿ. ಚಿಲಮಿ – ಪುಟ ೩೦

ಪ್ರಬಂಧಗಳನ್ನು ಹಲವಾರು ಮಹನೀಯರು ಈ ರೀತಿಯಾಗಿ ವಿಂಗಡಿಸಿರುವರು. ಈ ಕೆಳಗಿನಂತಿವೆ. ವೀರೇಂದ್ರ ಸಿಂಪಿಯವರು –

೧) ಲಲಿತ ಪ್ರಬಂಧಗಳು

೨) ಹಾಸ್ಯ, ಹರಟೆ, ವಿಡಂಬನೆ ಎಂದು ವಿಂಗಡಿಸಿರುವರು.

**ಡಾ. ವಿ. ಕೃ ಗೋಕಾಕರು –**

೧) ನಿಬಂಧ

೨) ಹರಟೆ – ಎಂದು ಅದರ ಜೊತೆಗೆ ಇನ್ನೂ ಚಿಂತನಾಪರ, ಐತಿಹಾಸಿಕ, ವೈಜ್ಞಾನಿಕ, ವಿಮರ್ಶಾತ್ಮಕ, ಪತ್ರಪ್ರಬಂಧ, ಹರಟೆ, ವಿನೋದ, ವಿಡಂಬನೆ ಎಂಬ ವಿಧಗಳನ್ನು ಸೂಚಿಸಿದ್ದಾರೆ.

**ರಾಷ್ಟ್ರಕವಿ ಎಂ. ಗೋವಿಂದಪೈಗಳು** – ಒಟ್ಟು ಏಳು ರೀತಿ ಪ್ರಬಂಧಗಳ ಬಗ್ಗೆ ವಿವರಿಸಿದ್ದಾರೆ.

೧) ಚಿತ್ರ ಪ್ರಬಂಧ

೨) ವಿನೋದ ಪ್ರಬಂಧ

೩) ಜ್ಞಾನ ಪ್ರಬಂಧ

೪) ವೈಣಿಕ ಪ್ರಬಂಧ

೫) ವಿಮರ್ಶನ ಪ್ರಬಂಧ

೬) ಐತಿಹಾಸಿಕ ಪ್ರಬಂಧ

೭) ಪ್ರಕೃತಿ ಪರವಾದ ಪ್ರಬಂಧ

**ಎಸ್. ಮಂಜುನಾಥ** ಅವರು ತಮ್ಮ 'ಇಂಗ್ಲೀಷ ಪ್ರಬಂಧಗಳು' ಎಂಬ ಗ್ರಂಥದಲ್ಲಿ –

೧) ಪ್ರೌಢ ಪ್ರಬಂಧ

೨) ಲಲಿತ ಪ್ರಬಂಧ – ಎಂದು ಎರಡು ವಿಧಗಳ ಬಗ್ಗೆ ಸೂಚಿಸಿದ್ದಾರೆ.

ಇಲ್ಲಿಯವರೆಗೆ ನಮ್ಮ ಪ್ರಬಂಧ ಸಾಹಿತ್ಯ ಎಲ್ಲಿಂದ ಬಂತು ಹಾಗೂ ವಿವಿಧ ಲೇಖಕರು ಅಧ್ಯಯನವನ್ನು ಅನುಲಕ್ಷಿಸಿ ವಿಂಗಡಣೆ ಮಾಡಿರುವುದನ್ನು ಕಂಡುಕೊಳ್ಳಲಾಯಿತು.

"ಹಾಸ್ಯ ಜಗತ್ತನ್ನೇ ಆಳುವುದು" ಹಾಸ್ಯವಿಲ್ಲದವನ ಜೀವನ ಬರಿಗೋಳು "ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ" ಎಂಬ ಸರ್ವಜ್ಞನ ಅಭಿಪ್ರಾಯ ಸೂಕ್ತವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಸಾಹಿತಿಗಳು ಸಿಗುವುದು ಕಡಿಮೆ. ಆದರೆ ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಅವರ ಸಾಹಿತ್ಯ ಗುಣಾತ್ಮಕವಾದುದು, ಸತ್ವಯುತವಾದುದು ಆಗಿದೆ.

ಕನ್ನಡದಲ್ಲಿ ಹಾಸ್ಯ ಸಾಹಿತ್ಯವನ್ನು ರಚಿಸದವರೆಂದರೆ ಬೀಚಿ, ಲಾಂಗೂಲಾಚಾರ್ಯ, ಗೊರೂರು, ಎನ್ಕೆ, ಮಹಿಳೆಯರಾದ ಟಿ. ಸುನಂದಮ್ಮ, ಸುನಂದಾ ಬೆಳಗಾಂವಕರ, ಗುರುದೇವ ಹುಲೆಪ್ಪನವರಮಠ ಇವರ ಸಾಲಿನಲ್ಲಿ ನಿಲ್ಲತಕ್ಕರು ನಮ್ಮ ಹಾಸ್ಯ ಸಾಹಿತಿ ಮಲ್ಲಿಕಾರ್ಜುನ ಹುಲಗಬಾಳಿಯವರು.

ಕೇವಲ ಹಾಸ್ಯಸಾಹಿತ್ಯಕ್ಕೆ ತಮ್ಮನ್ನು ತೊಡಗಿಸಿಕೊಳ್ಳಲಾರದೆ, ಸಮಾಜವನ್ನು ತಿದ್ದುವಲ್ಲಿ ಪತ್ರಿಕಾ ಅಂಕಣ ಬರಹಗಾರರಾಗಿ, ಸಾಮಾಜಿಕ ಕ್ಷೇತ್ರದಲ್ಲಿ ಸುಧಾರಣೆಗೋಸ್ಕರ 'ವಿಜಯದೀಪ' ವಯಸ್ಕರ ಶಿಕ್ಷಣ ಸಮಿತಿಯ ಸಂಚಿಕೆ ಸಂಪಾದಕ ಮಂಡಳ ಸದಸ್ಯರಾಗಿ ಸೇವೆಸಲ್ಲಿಸಿರುವರು. 'ಭಾಗ್ಯದ ಬಾಗಿಲು'

ಬಸನೂಗಿ ಸ್ಮರಣ ಸಂಚಿಕೆ ಸಂಪಾದಕರಾಗಿ, 'ದಶಕದರ್ಶನ' ಬನಹಟ್ಟಿ ಸಹಕಾರಿ ನೂಲಿನ ಗಿರಣಿಯ ಸ್ಮರಣ ಸಂಚಿಕೆ ಸಂಪಾದಕರಾಗಿ, 'ಬೆಳಗಲಿ', 'ದೇವನಮನೆ' ಅಭಿನಂದನ ಗ್ರಂಥಗಳ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ.

ಇವರ ಹಾಸ್ಯ ಲೇಖನಗಳು ಸುಧಾ, ಪ್ರಜಾವಾಣಿ, ಕನ್ನಡಪ್ರಭ, ಕರ್ಮವೀರ, ಉದಯವಾಣಿ, ತುಷಾರ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಣೆಗೊಂಡಿವೆ.

ಡೆಕ್ಕನ್ ಹೆರಾಲ್ಡ, ಇಂಡಿಯನ್ ಎಕ್ಸಪ್ರೆಸ್, ಪ್ರಜಾಭಿಮಾನಿಯಲ್ಲಿ 'ಅಂಕುಶ', 'ವಿಕ್ರಾಂತ ಭಾರತ'ದಲ್ಲಿ 'ಜಂತರ ಮಂತರ' 'ಜನಮತರಂಗ'ದಲ್ಲಿ ಫೋಕಸ್ ಪ್ರಸಂಗಗಳು' ಅಂಕಣ' ಸಾಹಿತ್ಯ ಪ್ರಕಟಣೆಗೊಂಡಿವೆ.

ಧಾರವಾಡ ಆಕಾಶವಾಣಿಯಿಂದ ಇವರ 'ಹತ್ತು ರೇಡಿಯೋ ನಾಟಕಗಳು' ಹಾಗೂ ಲಘ ಭಾಷಣಗಳು ಪ್ರಸಾರಗೊಂಡಿವೆ.

**ಹುಲಗಬಾಳಿಯವರ ಹಾಸ್ಯ ಪ್ರಬಂಧ ಸಂಕಲಗಳು :**

೧) ಟೊಂಯ್ ಟೊಂಯ್ ಮಾತು
೨) ಉದರೋಪನಿಷತ್
೩) ಗುಡ್ ಬೈ ಬಿಜಾಪುರ
೪) ಚಷ್ಮಾ ಚರಿಷ್ಮಾ
೫) ನಾಲಗೆಯ ಮೇಲೊಂದಿಷ್ಟು
೬) ಅನುಕೂಲಕ್ಕೊಂದು ಅವತಾರ
೭) ಜನರಲ್ ಬೋಗಿ

ನಗೆಯು ಒಂದು ಸೂಕ್ಷ್ಮ ಅಸ್ತ್ರ : ಇದರ ಸಹಾಯದಿಂದ ಸಮಾಜವನ್ನು ತಿದ್ದಬಹುದು, ವ್ಯಕ್ತಿಗಳನ್ನು ಸುಧಾರಿಸಬಹುದು. ಅದರಲ್ಲಿಯೂ ಉತ್ತಮ ನಗೆಯು ಯಾರ ಮನಸ್ಸನ್ನು ನೋಯಿಸದೆ, ನಕ್ಕುನಗಿಸುವ ಪ್ರಕಾರದ್ದು, ಹುಟ್ಟು ನಗೆಗಾರನು ತನ್ನನ್ನೆ ನಗೆಗೆ ಗುರಿಪಡಿಸಿಕೊಂಡು, ಹಾಸ್ಯವನ್ನು ನಿರ್ಮಿಸಿ ಮಾನವ ದೌರ್ಬಲ್ಯಗಳನ್ನು ನಯವಾಗಿ ಚಿತ್ರಿಸುತ್ತಾನೆ. ಕವಿ ಸರ್ವಜ್ಞ ಇದಕ್ಕೆ ಹೊರತಾಗಿಲ್ಲ. ಗಂಭೀರವಾಗಿ ಉಪದೇಶ ಮಾಡಿದಾಗ ಸಮಾಜ ಸುಧಾರಣೆ ಅಷ್ಟಕಷ್ಟೆ. ಆದರೆ ಒಳ್ಳೆಯ ಹಾಸ್ಯಗಾರ ಬೇಸರವನ್ನು ದೂರ ಮಾಡಿ ಕಾಂತೆಯಂತೆ ಸಲಹೆ – ಸೂಚನೆ ನೀಡುವನು. ನಗೆಯಲ್ಲಿಯೇ ಜನರನ್ನು ತಿದ್ದಲು ಸಾಧ್ಯವಾಗುವುದು. ಗಂಭೀರ ಜನರನ್ನು ತಿದ್ದಲು ಸಾಧ್ಯವಾಗುವುದು. ಗಂಭೀರ ತತ್ವಜ್ಞಾನಿ ಮಾಡಲಾರದ ಕಾರ್ಯವನ್ನು, ನಗೆಗಾರನು ಅತಿ ಸುಲಭವಾಗಿ ಸಾಧಿಸಿ ತೋರಿಸುವನು. ಇಂಥ ನಗೆಯನ್ನೇ (ಹಾಸ್ಯ) ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಅನೇಕ ಬರಹಗಾರರು ಹಾಸ್ಯ ಪ್ರಬಂಧಗಳನ್ನು ರಚಿಸಿರುವರು.

ದ. ರಾ. ಬೇಂದ್ರೆಯವರು ಶ್ರೀ ವೈ. ಕೆ. ತಿಮ್ಮಾರಸಯ್ಯ ಅವರ 'ನಗೆಮಾಲೆ'ಗೆ ಮುನ್ನುಡಿ ಈ ರೀತಿಯಾಗಿ ಬರೆದಿರುವರು. "ನಗೆ ಬರಹಗಳನ್ನೋದಿ ನಾವು ನಗುವುದು ಅಲ್ಲಿಯ ಪಾತ್ರ, ಸಂದರ್ಭ,

ಮಾತುಗಳಿಗಾಗಿ ಅಷ್ಟೇ ಅಲ್ಲ. ಅಂಥ ಗುಣಾವಗುಣಗಳು ಹುಳುಗಳಂತೆ ನಮ್ಮಲ್ಲಿಯೂ ಮನೆ ಮಾಡಿಕೊಂಡಿರುತ್ತವೆ. ನೋವರಿಯದ ನಿಷ್ಕರುಣ ನಗೆ ಅಷ್ಟು ಹಿತಕಾರಿಯಲ್ಲ. ಮಾನವನ ಹುಚ್ಚು ಹುಚ್ಚು ನಡತೆ–ನೀತಿ ನೋಡಿ ನಮಗೆ ಬರುವ ನಗೆಯಲ್ಲಿ ಸೋದರಭಾವವಿದೆ. ಇಂಥ ಬರವಣಿಗೆ ಇಂದಿನ ಜೀವನದಲ್ಲಿ ಸಾವಿರ ಮುಖಗಳಿಂದ ಬಂದು ನಮ್ಮ ಸೋದರಿಕೆಯನ್ನು ಹದಮಾಡಬೇಕು. ವಿಶ್ವಕುಟುಂಬ ಭಾವನೆಯಲ್ಲಿ ಅಕುಟಿಲವಾದ ಹಾಸ್ಯ ಸಂಸ್ಕಾರವೂ ಸೇರಿಕೊಳ್ಳುತ್ತದೆ".[೨] ಬೇಂದ್ರೆಯವರ ಅಭಿಪ್ರಾಯವನ್ನು ಅನುಲಕ್ಷಿಸಿದಾಗ ನಮಗೆ ಹಾಸ್ಯ ಕೇವಲ ಒಂದು ಸಂದರ್ಭಕ್ಕೆ, ಸನ್ನಿವೇಶಕ್ಕೆ ಮಾತ್ರ ಸೀಮಿತವಲ್ಲ. ಸಾರ್ವಕಾಲಿಕ ಪ್ರಯೋಜನ ಹೊಂದಿದೆ ಎಂಬುದು ತಿಳಿದು ಬರುವುದು.

ಕಾರಂತರ ಅಭಿಪ್ರಾಯದಂತೆ ಹಾಸ್ಯ ಪ್ರಬಂಧಗಳ ವಿಚಾರ ಈ ರೀತಿಯಾಗಿವೆ – "ನಮ್ಮ ಜನತೆಯ ಸಂಸ್ಕೃತಿಯ ಮೈಲ್ಲಿಕಲ್ಲುಗಳೇ ಈ ವಿವಿಧ ನಿಬಂಧಗಳ ಗುರಿ; ಅವನ್ನು ಕೆಣಕಿ, ವಿಚಾರಪ್ರಚೋದನೆ ಮಾಡುವುದೇ ಉದ್ದೇಶ. ಅವುಗಳಲ್ಲಿ ಕೆಲವು ನಿರುದ್ದೇಶಿತವಾದ ಹಾಸ್ಯಪ್ರೇರಣೆ ಮಾಡಲುಬಹುದು".[೩]

ಬೀಚಿಯವರು ಹಾಸ್ಯ ಸಾಹಿತಿ, ಅವರ ಬಗ್ಗೆ ಡಾ॥ ವಿ. ಕೆ. ಗೋಕಾರರು ಈ ರೀತಿ ವಿಮರ್ಶೆ ಮಾಡುವರು – "ಬೀಚಿಯವರ ಹುಟ್ಟು ನಗೆಗೆ ಮಾಸುವುದೆಂಬುವದಿಲ್ಲ. ಅಳುವು ತುಂಬಿದ ಪ್ರಪಂಚದಲ್ಲಿ ನಗೆಯನ್ನು ಬೀರುವ ಸಾಹಿತಿಗಳಿದ್ದಷ್ಟು ನಾಡಿಗೆ ಕ್ಷೇಮ ಎಂದಿದ್ದಾರೆ". ಲಂಕೇಶ ಅವರು "ಬೀಚಿಯವರು ತಿಂಮನಂಥ ಒಬ್ಬ ವ್ಯಕ್ತಿಯನ್ನು ಸೃಷ್ಟಿಸಿ ಬಂದ ಜನಾಂಗವನ್ನು ನಗಿಸಿದ್ದಾರೆ"[೪] ಎಂದು ಪ್ರಶಂಸೆ ಮಾಡಿದ್ದಾರೆ.

### ೧) 'ಟೊಂಯ್ ಟೊಂಯ್ ಮಾತು'

ಹುಲಗಬಾಳಿಯವರ ಪ್ರಪ್ರಥಮ ಪ್ರಬಂಧ ಕೃತಿ ಒಟ್ಟು ೧೩ ಹಾಸ್ಯ ಬರೆಹಗಳಿಂದ ಕೂಡಿದ್ದು, ಪ್ರಕಾಶಕರು 'ಸ್ನೇಹ ಸಂಪದ ಪ್ರಕಾಶನ' ಬನಹಟ್ಟಿ ಮೆಡಿಕಲ್ ಸ್ಟೋರ್ಸ, ಬನಹಟ್ಟಿ. ಮುಖಪುಟ ವಿನಾಸಗಾರರು ಅಶೋಕ ಹಳ್ಳಿ, ಯಶವಂತ ವಾಜಂತ್ರಿ ಆಕರ್ಷಕ ಮುಖಪುಟ ವಿನ್ಯಾಸಗೊಳಿಸಿರುವರು. ಮುದ್ರಕರು ಮುಧುಕೇಶ್ವರ ಬೆಳಗಲಿ ಮಂಗಲ ಮುದ್ರಣ. ಸೋಮವಾರ ಪೇಟೆ, ಬನಹಟ್ಟಿ. ಪ್ರಕಟಣೆ ವರ್ಷ – ೧೯೯೪, ಮುನ್ನುಡಿಕಾರರು – ಹುಲಗಬಾಳಿಯವರು ವಿದ್ಯಾಗುರುಗಳಾದ ದು. ನಿಂ. ಬೆಳಗಲಿ ಬೆನ್ನುಡಿ ಮಾತು 'ಜಯವಂತ ಕಾಡದೇವರ' ಅವರು ಲೇಖಕರ ಹವ್ಯಾಸಗಳ ಬಗ್ಗೆ ಪ್ರಸ್ತಾಪಿಸಿರುವರು. ಕಾಕತಾಳಿಯಂತೆ ಈ ಕೃತಿ ಹುಲಗಬಾಳಿಯವರ ತಂದೆಯವರ ಪ್ರಥಮ ಪುಣ್ಯತಿಥಿ ದಿನದಂದೇ ಪ್ರಕಟಗೊಂಡಿದ್ದು. ಲೇಖಕರಿಗೆ ಸಂತೋಷವನ್ನುಂಟು ಮಾಡಿದ ದಿನವಾಗಿದೆ.

ಈ 'ಟೊಂಯ್ ಟೊಂಯ್ ಮಾತು' ಹಾಸ್ಯ ಸಂಕಲನ ೧೩ ಹಗುರ ಬರೆಹಗಳಿಂದ ಕೂಡಿದ್ದು, ಓದುಗರ ಮನಸ್ಸನ್ನು ಹಗುರಗೊಳಿಸುವ ಕಲೆ ಲೇಖಕರಿಂದ ಹಾಸ್ಯ ಪೂರ್ಣವಾಗಿ ಮೂಡಿಬಂದಿದೆ.

೨. ಪ್ರಬಂಧ ಪ್ರಪಂಚ : ಹಾ. ಯ. ಧಾರವಾಡಕರ ಅಭಿನಂದನ ಸಂಪುಟ : ಪುಟ – ೨೧೮

೩. ಅದೇ : ಪುಟ – ೨೧೯

೪. ಅದೇ : ಪುಟ – ೨೨೦

ಪ್ರಾರಂಭದ 'ಬಸ್ಸ್ಟ್ಯಾಂಡ್ ಪಕ್ಕದಲ್ಲೊಂದು ಮನೆಯ ಮಾಡಿ' ಹಾಸ್ಯ ಪ್ರಬಂಧದಿಂದ ಇದು ಹಲವಾರು ಹಾಸ್ಯ ವಿಚಾರಗಳಿಂದ ಕೂಡಿ ಕೊನೆಯ 'ಟೊಂಯ್ ಟೊಂಯ್ ಮಾತು' ಹಗುರ ಬರೆಹಕ್ಕೆ ನಮ್ಮನ್ನು ಕರೆದು ಒಯ್ಯುವುದು.

**ಒಟ್ಟು ಹಾಸ್ಯ ಬರೆಹಗಳು ಇಂತಿವೆ.**

೧) ಬಸ್ಸ್ಟ್ಯಾಂಡ್ ಪಕ್ಕದಲ್ಲೊಂದು ಮನೆಯ ಮಾಡಿ
೨) ಮೇರಾ ಭಾರತ್ ಮಹಾನ್
೩) ಶ್ರೀಮತಿ ಎಂಬ ಭಿನ್ನಮತಿ
೪) ಸಾಲಾ ಮನ್ನಾ
೫) ಕ್ರಿಕೆಟ್ (ಭಿನ್ನ) ಪ್ರೇಮ
೬) ಹೀಗೊಂದು ಮ. ಬಿ. ಸಮಾರಂಭ
೭) ಗಾದೆ – ತಗಾದೆ
೮) ನಮ್ಮಲ್ಲೊಬ್ಬ ವೀರಪ್ಪನ್
೯) ಬಿದ್ದೋನೆ ಗೆದ್ದೋನು
೧೦) ಮೂರ್ ಮೂಲನ್
೧೧) ಬ್ಯಾಡಂದ್ರೂ ಯಾಕ ಬೇಡ್ತಿ?
೧೨) ಬ್ಯಾಗು ಸೇರಿದ ಬೇತಾಳ
೧೩) ಟೊಂಯ್ ಟೊಂಯ್ ಮಾತು

೧) **ಬಸ್ಸ್ಟ್ಯಾಂಡ್ ಪಕ್ಕದಲ್ಲೊಂದು ಮನೆಯ ಮಾಡಿ :**

'ಹಾಸ್ಯ ಇವತ್ತಿನ ದಿನಗಳಲ್ಲಿ ಅತಿ ಕಡಿಮೆ, ಪತ್ರಿಕೆ, ಕರ್ಮವೀರ, ಸುಧಾ, ತರಂಗಗಳಲ್ಲಿ, ತುಷಾರ, ಮಯೂರ (ಮಾಸಿಕ ಪತ್ರಿಕೆ) ಅಲ್ಲಲ್ಲಿ ಇಣುಕು ನೋಡಿ, ಮಿಂಚಿನಂತೆ ಮಾಯವಾಗುತ್ತವೆ. ನಮ್ಮ ಮಲ್ಲಿಕಾರ್ಜುನ ಹುಲಗಬಾಳಿಯವರು ತಮ್ಮ ಹಾಸ್ಯ ಪ್ರಬಂಧಗಳನ್ನು ಸಾಹಿತ್ಯ ಲೋಕಕ್ಕೆ ಅರ್ಪಣೆ ಮಾಡಿ ಓದುಗರನ್ನು (ನಮ್ಮನ್ನು) ನಗೆಯ ಹೊನಲಲ್ಲೇ ಮುಳುಗಿಸಿದ್ದಾರೆ. ಅವರ ಪ್ರಥಮ 'ಟೊಂಯ್ ಟೊಂಯ್ ಮಾತು' ಹಾಸ್ಯ ಪ್ರಬಂಧಗಳ (ಲಘು ಬರೆಹಗಳ) ಶೀರ್ಷಿಕೆ ಕಂಡ ಕ್ಷಣ ಇದೇನು ಇಂಥ ವಿಚಿತ್ರ ತಲೆಬರಹ ಹೊಂದಿದೆ ಎಂದು ಪುಟ ತೆರೆದು ಓದಿದಾಗ ಅಲ್ಲಿರುವ ಹಾಸ್ಯದ ಪ್ರತಿಯೊಂದು ಹಗುರ ಬರೆಹಗಳು ನನ್ನನ್ನು ನಗೆಯಲ್ಲಿ ಮುಳುಗಿಸಿದವು.

'ಬಸ್ಸ್ಟ್ಯಾಂಡ್ ಪಕ್ಕದಲ್ಲೊಂದು ಮನೆಯ ಮಾಡಿ' ಈ ಹಗುರ ಬರೆಹದಲ್ಲಿ ಲೇಖಕರು ತಮ್ಮ ಸ್ವಂತ ಅನುಭವವನ್ನು ಹಾಸ್ಯ ಲೇಖನವನ್ನಾಗಿ ಚಿತ್ರಿಸಿರುವರು. ಅವರು ಸದ್ಯಕ್ಕೆ ತಮ್ಮ ಮನೆಯನ್ನು ಬಸ್ ಸ್ಟ್ಯಾಂಡ್ ಪಕ್ಕದಲ್ಲಿಯೇ ಕಟ್ಟಿಸಿರುವರು. ತಮಗಾದ ದಿನ ನಿತ್ಯದ ಅನುಭವಗಳನ್ನು ಈ ಹಾಸ್ಯ ಲೇಖನದಲ್ಲಿ ಚಿತ್ರಿಸಿರುವರು. ಊರಿಗೆ ಹೋಗುವ ಗೆಳೆಯರ ಗುಂಪು, ನೆಂಟರ–ಇಷ್ಟರು, ಬಸ್ ತಪ್ಪಿದಾಗ ಇವರ ಮನೆಗೆ ಬಂದು ಹೋಗುವ ರೀತಿಯನ್ನು ಹಾಸ್ಯ ಭರಿತವಾಗಿ ಚಿತ್ರಿಸಿರುವರು.

ಹೊರಗಡೆ ಮಕ್ಕಳು ಆಟಕ್ಕೆ ಬಂದಾಗ ಮನೆಯ ಗ್ಲಾಸು ಒಡೆದು ಹೋಗುವ ಪರಿಯ ಬಗ್ಗೆ ಹೇಳುತ್ತಾ 'ಗಾಜಿನ ಗ್ಲಾಸುಗಳ ಬಾಕ್ಸ್ ರಕ್ಷಿಸುವಲ್ಲಿ ನನ್ನ ಬಿ. ಪಿ. ಮೇಲೇರಿತ್ತು. ಉಗ್ರ ಗ್ರಾಮಿಗಳಿಂದ ವ್ಹಿ.ಐ.ಪಿ.ಗಳ ಪ್ರಾಣ ರಕ್ಷಿಸುವ ಬ್ಲಾಕ್ ಕಮಾಂಡೋ ನೆನಪಿಗೆ ಬಂದರು' ಎನ್ನುವ ಲೇಖಕರು ಮಾತು ಹಾಸ್ಯದಿಂದ ಕೂಡದಿದ್ದರೂ ಚಿಂತನೆ ಒಳಪಡಿಸಿರುವುದು.

ಬಸ್ ತಪ್ಪಿದಾಗ ಆತ್ಮೀಯರು ವಕ್ಕರಿಸುವ ರೀತಿ, ನಮ್ಮಜ್ಜಿಗೆ ಕುಡಿಯಲು ಬಿಸಿನೀರು ಕಾಯಿಸಿ ಕೊಡಿ, ಅದೇ ರೀತಿ 'ಶಿಷ್ಯರು ಗುರುಗ್ರಹಕ್ಕೆ ಹರಟೆ ಹೊಡೆಯಲು ವಕ್ಕರಿಸುವ ಪರಿ' ಲೇಖಕರನ್ನು ಚಿಂತೆಗೆ ಇಡು ಮಾಡಿರುವ ನೀತಿಯನ್ನು ಈ ಹಾಸ್ಯ ಲೇಖನದಲ್ಲಿ ಚಿತ್ರಿಸಿರುವರು.

ಲೇಖಕರು ಈ ಎಲ್ಲ ಜನರ ಕಾಟ ತಡೆಯಲಾರದೆ 'ಬಸ್ಸ್ಟ್ಯಾಂಡಿಗೆ ಒಂದೋರು ಮನೆಗೆ ಬರ್ದೇ ಇರ್ತಾರೆಯೇ?' ನವ್ಯ ಗಾದೆಯನ್ನು ಸೃಷ್ಟಿ ಮಾಡಿರುವುದು ಉಚಿತವೆನಿಸುವುದು. ಇದು ಮಾರ್ಚ ೧೯೯೧ ವಿನೋದದಲ್ಲಿ ಪ್ರಕಟಗೊಂಡಿದೆ.

೨) **ಮೇರಾಭಾರತ ಮಹಾನ್** : ಈ ಎರಡನೆಯ ಹಾಸ್ಯ ಬರೆಹ ಕಂಡಾಗ ನನಗೆ ಭಾರತ ಮಹಾನ್ ಆಗಿದೆ. ಲೇಖಕರು ಇದರಲ್ಲಿ ಏನು ವಿಶೇಷ ಕಂಡರು ಎಂದು ಓದುತ್ತಾ ಸಾಗಿದಾಗ, ಮುಷ್ಕರಗಳ ಹಾವಳಿಯನ್ನು ತಮ್ಮ ಹಾಸ್ಯ ಲೇಖನಕ್ಕೆ ವಸ್ತುವನ್ನಾಗಿ ಸ್ವೀಕರಿಸಿ, ಅದನ್ನು ಓದುಗರಿಗೆ ನೀಡಿರುವರು. ವಿದ್ಯುತ್, ನೀರು ಸರಬರಾಜು, ಬಸ್ ಎಲ್ಲದಕ್ಕೂ ವಿಠ್ಠುಗೆ ಇವತ್ತು ಮುಷ್ಕರ ಎಂಬುದನ್ನು ಕಂಡು, ನಮ್ಮ ದೇಶ ಮಹಾನ್ ಎಂಬ ಉದ್ಗಾರ ಆತನಿಗೆ ಅರಿವಿಲ್ಲದೆ ಬಂದಿತು. ಈ ಲೇಖನ 'ಕನ್ನಡ ಪ್ರಭ'ದಲ್ಲಿ ಮೇ ೧೨, ೧೯೯೨ ರಲ್ಲಿ ಪ್ರಕಟಗೊಂಡಿದೆ.

೩) **ಶ್ರೀಮತಿ ಎಂಬ ಭಿನ್ನಮತಿ** : ಈ ಲೇಖನದಲ್ಲಿ 'ಸ್ತ್ರೀ ಶೋಷಣೆ ವಿರುದ್ಧ ಬಂಡೇಳುವ ದೃಶ್ಯ ಅಡುಗೆ ಮನೆಯಿಂದ ಪ್ರಾರಂಭವಾಗುವ ರೀತಿಯನ್ನು ಲೇಖಕರು ಹಾಸ್ಯಕ್ಕೆ ಅಳವಡಿಸುವರು. ಹೆಂಗಸರಿಗೆ ಸೀರೆಯೆಂದರೆ, ಒಡವೆ ಎಂದರೆ ಪಂಚಪ್ರಾಣ. 'ಸರಸು' ಕೂಡ ತಮ್ಮ ಮನೆಯವರನ್ನು ಸೀರೆ ಕೊಡಿಸಲು ಕೇಳಿ ಮುಷ್ಕರ ಹೂಡಿದ್ದಳು. ಪತಿಗೆ ಉಪವಾಸವೇ ಗತಿ. ಆದರೆ ಅವಳು ಮೊದಲು ಗಂಡನಿಗೆ ನೇರವಾಗಿ ಹೇಳಿದಾಗ ಒಪ್ಪದೇ ಇದ್ದಾಗ, 'ಸುತ್ತು ಬಳಸಿ ಮೈಲಾರಕ್ಕೆ ಹೋದಂತೆ' ದೇವಿ ನೆಪ ಮಾಡಿಕೊಂಡು ಒಂದರ ಬದಲಾಗಿ ಒಂಭತ್ತು ಸೀರೆ ಪಡೆದುಕೊಂಡದ್ದು, ಗಂಡಸರನ್ನು ಮರಳು ಮಾಡಿ, ತನ್ನ ಆಸೆಯಂತೆ ಸೀರೆ ಪಡೆದುಕೊಂಡದ್ದು 'ಶ್ರೀಮತಿ ಎಂಬ ಭಿನ್ನಮತಿ' ಎಂಬುದು ನಮಗೆ ಅನಿಸಿದೇ ಇರದು. ಈ ಬರಹ 'ಪ್ರಜಾವಾಣಿ ಅಕ್ಟೋಬರ್ ೨೧, ೧೯೯೧ ರಂದು ಪ್ರಕಟಣೆಗೊಂಡಿದೆ.

೪) **ಸಾಲಾ ಮನ್ನಾ** : ಇದೇನು ನಾವೆಲ್ಲ ರೈತರಿಗೆ 'ಸಾಲ ಮನ್ನಾ' ಯೋಜನೆಯನ್ನು ಪತ್ರಿಕೆಯಲ್ಲಿ, ವಾರ್ತೆಗಳಲ್ಲಿ ಕೇಳುತ್ತಿರುತ್ತೇವೆ. ಇದೇನು ಸಾಲಾ ಮನ್ನಾ ವಿಚಿತ್ರವಾಗಿದೆಯಲ್ಲಾ, ಹೌದು ಲೇಖಕರು. ಅಳಿಯ 'ವಿಠ್ಠು' ಹೋಟೆಲ್‌ದಲ್ಲಿ ಕಂಠಮಟ ತಿಂದು ಉದ್ರಿ ಮಾಡಿ ಬಂದಿದ್ದ ಆ ಉದ್ರಿ ತೀರಿಸಲಿಕ್ಕೆ ಅಕ್ಕನ ಉಂಗುರು ಕಳೆದು ಹೋಗಿದೆ ಎಂದು ಹೋಟೆಲಿನಲ್ಲಿ ಅಡುವು ಇಟ್ಟು ಬಂದಿದ್ದ.

ಈ ಒಂದು ಲೇಖನ ನಮ್ಮ ಆಧುನಿಕ ಹುಡುಗರ ರೀತಿ-ನೀತಿಗೆ ಕೈಗನ್ನಡಿಯಂತಿದೆ. ಹುಡುಗರನ್ನು ಓದಿಸಲಿಕ್ಕೆ ಪಟ್ಟಣಕ್ಕೆ ಕಳುಹಿಸಿದಾಗ ಅವರು ಇದ್ದ ಹಣವನ್ನು ಹಾಳುಮಾಡಿ, ಶರೀರ ಹಾಳು ಮಾಡಿಕೊಂಡು ಕೊನೆಗೆ ನಿರುಪಯುಕ್ತ ವಸ್ತುಗಳಾಗಿ ಉಳಿಯುವರು. ಈ ಬರಹ 'ವಿನೋದ'ದಲ್ಲಿ ಜೂನ ೧೯೯೧ ರಲ್ಲಿ ಪ್ರಕಟಗೊಂಡಿದೆ.

೫) **ಕ್ರಿಕೆಟ್ (ಭಗ್ನ) ಪ್ರೇಮ :** 'ಪಂಡರಪುರದ ವಿಠ್ಠಲ ಈಗ ತಿರುಪತಿ ತಿಮ್ಮಪ್ಪನ ಅವತಾರ ಧರಿಸಿದ್ದ ಯಾಕೆ ಎಂತ ಕಾರಣ ಕೇಳಿದಾಗ ಆತ ತನ್ನ ಕ್ರಿಕೆಟ್ ಪ್ರೇಮ ಬಗ್ಗೆ ವಿವರಿಸಿದನು. ಈ ಒಂದು ಲೇಖನದಲ್ಲಿ ಲೇಖಕರು ಕ್ರಿಕೆಟ್ ಆಟದ ಪ್ರತಿಯೊಂದು ಪದಗಳಿಗೆ 'ಪ್ರೇಮಾಯಣವನ್ನು' ಸೃಷ್ಟಿಸಿರುವರು.

ಉದಾಹರಣೆಗಾಗಿ :

* ಎಲ್.ಬಿ.ಡಬ್ಲೂ – 'ಲವ್ವ ಬಿಫೋರ್ ವೆಡ್ಡಿಂಗ್'
* ರನ್ ಔಟ್ – ಹೇಳದೆ ಕೇಳದೆ ಪ್ರೇಮಿಯೊಂದಿಗೆ ರಾತ್ರಿ ಓಡಿ ಹೋಗಿ ಕಾಲು ಮುರಿಸಿಕೊಂಡದ್ದು.
* ಕ್ಯಾಚ್ ಔಟ್ – ಕನ್ಯಾಪಿತೃವಿನ ಆಗಮನದಿಂದ ಇವರ ರಹಸ್ಯ ಭೇಟಿಗೆ ಅಡ್ಡಿಯಾದದ್ದು.

ಈ ರೀತಿಯಾಗಿ ಪ್ರತಿಯೊಂದು ಶಬ್ದಗಳು ಕ್ರಿಕೆಟ್‌ದಿಂದ ಪ್ರೇಮಾಯಣಕ್ಕೆ ತಿರುಗಿ ಓದುಗರನ್ನು ನಗೆಯಲ್ಲಿ ಮುಳುಗಿಸುತ್ತವೆ. ಆದರೆ ಇದು ಆಧುನಿಕ (ಇವತ್ತಿನ) ಕಾಲೇಜಿನ-ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಕಿವಿ ಮಾತಿನಂತಿದೆ. ಈ ಲೇಖನ 'ಪ್ರಜಾವಾಣಿ' ೧ ಏಪ್ರಿಲ್ ೧೯೯೨ ರಲ್ಲಿ ಪ್ರಕಟಗೊಂಡಿದೆ.

೬) **ಹೀಗೊಂದು ಪು. ಬಿ. ಸಮಾರಂಭ :** ಶೀರ್ಷಿಕೆ ಕಂಡಾಗ ಏನು ಇದು ಪು.ಬಿ. ಎಂದು ಓದ ತೊಡಗಿದೆ. ಅಲ್ಲಿಯೇ ಅವರ ವಿಸ್ತೃತ ರೂಪ ದೊರೆಯಿತು. 'ಪುಸ್ತಕ ಬಿಡುಗಡೆ ಸಮಾರಂಭ' ಎಂದು. ಲೇಖಕರ ಶಿಷ್ಯ ಬಸು ತನ್ನ ಚೊಚ್ಚಿಲ ಕೃತಿ 'ಮದುವೆಯಾಗಿದೆ ಎಚ್ಚರಿಕೆ' ಎಂಬ ಪುಸ್ತಕ ಬಿಡುಗಡೆ ಸಮಾರಂಭಕ್ಕಾಗಿ ಆಹ್ವಾನ ಕೊಟ್ಟು ಹೋದ. ಆದರೆ ಆ ಬಿಡುಗಡೆ ಸಂಭ್ರಮ ಸಡಗರದಿಂದ ನಡೆಯದೆ. ಎಲ್ಲ ಕಡೆ ಅಷ್ಟಮ ಶನಿಕಾಟ ಪ್ರಾರಂಭವಾಯಿತು. ಮೂರು ಜನ ಸ್ಕೂಟರ ಮೇಲೆ ಪ್ರಯಾಣಿಸಿದ್ದರಿಂದ ಪೋಲೀಸರಿಗೆ ಕೊಡುವ ಮಾಮೂಲಿಗಿಂತ ಎರಡು ಪಟ್ಟು ತೆತ್ತಬೇಕಾಯಿತು. ಹಾಳೂರಿನ ಥೇಟರಿನಲ್ಲಿ ಪ್ರೇಕ್ಷಕರ ಕಲ್ಲಿನ ಹೊಡೆತ ತಿನ್ನಬೇಕಾಯಿತು. ನೋಡಿ ಇವರ ಪು. ಬಿ. ಸಮಾರಂಭ ಸ. ಬಿ. ಓಡಿ ಹೋಗುವುದಾಯಿತು. (ಸಮಾರಂಭ ಬಿಟ್ಟು ಓಡುವುದಾಯಿತು). ಇಲ್ಲಿ ನಾವು ಗುರುದೇವಿ ಹುಲ್ಲೆಪ್ಪನಮಠ 'ಬಿಡುಗಡೆಯ ಸಡಗರ' ಪ್ರಬಂಧ ಲೇಖನವನ್ನು ಮೆಲುಕು ಹಾಕಬಹುದಾಗಿದೆ. ಅದರ ಛಾಯೆ ಈ ಹಾಸ್ಯ ಬರಹದ ಮೇಲೆ ಬಿದ್ದಿರಬಹುದೆಂಬ ಅನಿಸಿಕೆ ನನ್ನದಾಗಿದೆ.

ಈ ಹಗುರ ಬರಹ ಸಮಾಜಕ್ಕೆ ಒಂದು ನೀತಿಯನ್ನು ಸೂಚಿಸುತ್ತದೆ. ಅಂದರೆ ಸಿನಿಮಾ, ನಾಟಕ ಮಂದಿರಗಳು ಕೇವಲ ಅವುಗಳಿಗಾಗಿ ಮೀಸಲು, ಪ್ರಚಾರ ಸಿಗುತ್ತವೆ ಎಂದು ಈ ರೀತಿ ಅಪಪ್ರಚಾರ, ಅಪಹಾಸ್ಯಕ್ಕೆ ಜನರು ಎಡೆಯಾಗದಂತೆ ಇರಲೆಂದು ಲೇಖಕರ ಹಾಸ್ಯದ ಜೊತೆಗೆ ನೀತಿ ಅಡಗಿದೆ.

ಈ ಬರಹ ದೀಪಾವಳಿ ವಿಶೇಷಾಂಕ ೧೯೯೩, 'ಕನ್ನಡಮ್ಮ'ದಲ್ಲಿ ಪ್ರಕಟಗೊಂಡಿದೆ.

೭) ಗಾದೆ – ತಗಾದೆ : ಈ ಮಾತನ್ನು ನಾವು ಆಗಾಗ ಆಡು ಮಾತಿನಲ್ಲಿ ಜೋಡಿಪದಗಳಾಗಿ ಬಳಸಬಹುದಗಿದೆ (ಬಳಸುತ್ತೇವೆ).

'ಗಾದೆ' ಈ ಪದದ ಅರ್ಥ ಎರಡು ತೆರ. ಒಂದು ಹಾಸಿಕೊಳ್ಳುವ ಹಾಸಿಗೆ, ಇನ್ನೊಂದು ನೀತಿ–ನಿಯಮ ಒಳಗೊಂಡ ಚಿಕ್ಕದಾದರೂ ಚೊಕ್ಕದಾದ ಶಬ್ದಾರ್ಥಗಳಿಂದ ಕೂಡಿದ ಮಾತು. 'ವೇದ ಸುಳ್ಳಾದರೂ – ಗಾದೆ ಸುಳ್ಳಲ್ಲ' ನಮ್ಮ ಹಿರಿಯರು ನಮ್ಮಷ್ಟು ಶಿಕ್ಷಣ ಪಡೆಯದೇ ಇದ್ದರೂ ಕೂಡ ಅವರು ಜೀವನಾನುಭವದ ಮಹಾಸಾಗರವಾಗಿದ್ದರು.

ಮೂವರು ಪುತ್ರರು ಗಾದೆ ಹಾಸಿಕೊಂಡು ಮಲಗುವರು ವಿನಃ ಹಾಸಿಗೆ ತೆಗೆದು ಇಡುವ ಹರಸಾಹಸ ಮಾಡಲಿಲ್ಲ. ಆದರೆ ತಂದೆ ಮಕ್ಕಳ ಚಾಕರಿ ಮಾಡುವುದು ಅಂತೂ ನಿಶ್ಚಿತ, ಇಲ್ಲದಿದ್ದರೆ ಹೆಂಡತಿ ತಗಾದೆ. ಪೇಪರಿನಲ್ಲಿ ಪ್ರಧಾನಿಗೆ ಎರಡು ಗಾದೆ ಎಂದು ಅಂದರೆ ಒಂದು ಪ್ರಧಾನಿ ಗಾದೆ, ಇನ್ನೊಂದು ಅಧ್ಯಕ್ಷರ ಗಾದೆ. ಅಂದರೆ ನಮ್ಮಲ್ಲಿ ಅಮ್ಮನಿಗೆ ಐದು ಗಾದೆ ಅಂದರೆ ಮನೆಯಲ್ಲಿ ಹಣಕಾಸಿನ, ಯೋಜನಾ ಗೃಹಸಚಿವೆ ಹಾಗೂ ವನಿತಾ ಸಂಘದ ಅಧ್ಯಕ್ಷಣಿ, ಹೊಸರುಚಿ ಸಂಘದ ಸೆಕ್ರೇಟರಿ ಎಂದು ಮಗ ಅವ್ವನ ಗುಣಗಾನ ಮಾಡಿದ ಅಂದರೆ ಗಂಡ ಕೇವಲ ಹೆಂಡತಿ ಗುಲಾಮ ಎನ್ನುವ ಅರ್ಥ ಇಲ್ಲಿದೆ. ಆದರೆ ಸಂಸಾರ ಎನ್ನುವ ಗಾಡಿಗೆ ಗಂಡ–ಹೆಂಡತಿ ಎರಡು ಚಕ್ರ ಇದ್ದಹಾಗೆ ಎರಡಕ್ಕೂ ಅಷ್ಟೇ ಮಾನ್ಯತೆ, ಕಿಮ್ಮತ್ತು ಇದೆ. ಆದರೆ ಲೇಖಕರು ತಿಂಗಳ ಪ್ರಾರಂಭದಲ್ಲಿ ಹಣ ತೆಗೆದುಕೊಂಡ ಮೇಲೆ ಗಂಡನಿಗೆ ಯಾವುದೇ ಮರ್ಯಾದೆ ಇಲ್ಲ. ಎಲ್ಲವೂ ಹೆಂಡತಿ ಮೇಜವಾಣಿ. 'ನೀ 'ನಾರಿಗೆ' 'ಅದೆಯೋ ಎಲೆ ಗಂಡಸೆ' ಎನ್ನುವ ಹೊಸ ಗಾದೆ, ಈ ಬರಹಕ್ಕೆ ಒಂದು ಹಾಸ್ಯ ರೇಖೆಯನ್ನು (ಗರಿ) ಮೂಡಿಸಿದೆ. ಈ ಲೇಖನ 'ಕನ್ನಡಪ್ರಭ' ಮೇ ೧೫, ೧೯೯೪ ರಲ್ಲಿ ಪ್ರಕಟಗೊಂಡಿದೆ.

೮) ನಮ್ಮಲ್ಲೊಬ್ಬ ವೀರಪ್ಪನ್ : ಕಾಡುಗಳ್ಳ ವೀರಪ್ಪ ಮಂತ್ರಿಗಳ ಸಹಾಯ – ಸಹಕಾರದಿಂದ ಕಾಡಿನಲ್ಲಿ ಪೋಲಿಸರಿಗೆ ಸಿಗದೇ ಸುಖವಾಗಿರುವನು. ಹಾಗೆ ಮನೆಯಲ್ಲಿ ಹೆಂಡತಿ ವಕ್ಕಾಲತ್ತನಿಂದ ಮಗನು ವೀರೂ ವೀರಪ್ಪನಂತೆ, ಸುಖವಾಗಿರುವನು. ಗಂಡನ ಪಗಾರ ಹೆಚ್ಚಾದರೆ ಮಗನಿಗೆ 'ಪಾಕೀಟಮನಿ' ಪ್ರಮಾಣ ಹೆಚ್ಚಾಗಬೇಕೆಂದು ಅಮ್ಮನ ವಕಾಲತ್ತು, 'ಅಮ್ಮನಿಗೆ ದುಡ್ಡು ಬೇಕಾದ್ರೆ ಮಗನ ಹಿಕ್ಮತ್ತು' ಎಂಬ ಮಾತು ಸೂಕ್ತವಾಗಿದೆ. ಇದರ ಜೊತೆ ರೂಪಾಯಿ ಅಪಮೌಲ್ಯದ ಬಗ್ಗೆ ಸೂಕ್ತವಾದ ಮಾಹಿತಿಯನ್ನು ಲೇಖಕರು ಸರಸು ಜೊತೆಗೆ ಚರ್ಚಿಸಿ ಮಾಹಿತಿ ನೀಡುವರು. ಇವತ್ತೀನ ತಾಯಿ – ಮಕ್ಕಳ ವಿಚಾರಗಳನ್ನು ಲೇಖಕರು ಇಲ್ಲಿ ಓದುಗರಿಗೆ ಉಣಬಡಿಸಿರುವರು.

ಈ ಲೇಖನ 'ಪ್ರಜಾವಾಣಿ' ಡಿಸೆಂಬರ್ ೨, ೧೯೯೧ ರಲ್ಲಿ ಪ್ರಕಟನೆಯಾಗಿದೆ.

೯) **ಬಿದ್ದೋನೆ ಗೆದ್ದೋನು** : ಪತ್ನಿಯ ಸಹೋದರ ಮೃತ್ಯು ಅರ್ಥಾತ್ ಮೃತ್ಯುಂಜಯ ಪಕ್ಷೇತರ ಅಭ್ಯರ್ಥಿಯಾಗಿ ಸೋತಾಗ. ಆತನನ್ನು ಸಂತೈಸಲು ಪತ್ನಿಸಮೇತ ಮೃತ್ಯುವಿನ ಮನೆಗೆ ಬಂದರು. ರಾಜಕಾರಣದ ಬಗ್ಗೆ ಚರ್ಚೆ ನಡೆಸಿದರು. ಲೇಖಕರ ಪತ್ನಿ ಅಣ್ಣನಿಗೆ 'ನೀನು ಪಕ್ಷೇತರ ಅಭ್ಯರ್ಥಿಯಾಗಿ ನಿಂತರೂ ಕೂಡ, ನೀನು ಕೇವಲ ಮಾತಿನಲ್ಲಿ ಸೋತವನು. ನಿನ್ನ 'ಬಟ್ಟೆ ಪಕ್ಷ' ನಿನ್ನನ್ನು ಮೂರಾಬಟ್ಟೆ ಮಾಡಿತು, ಎಂದು ತನ್ನ ಅಭಿಪ್ರಾಯ ಮಂಡಿಸಿದಳು. ಆದರೆ ಲೇಖಕರಿಗೆ ಮೃತ್ಯು 'ಭಾವಾ, ಕಾಲೇಜಿನಲ್ಲಿ ರಾಜ್ಯಶಾಸ್ತ್ರ ಕಲಿಸಬಹುದು. ಆದ್ರೆ ಇಡಿಯಾದ ರಾಜ್ಯಶಾಸ್ತ್ರ ನಿನ್ನ ತಲೆಗೆ ಹತ್ತುವುದಿಲ್ಲ'. ಎಂಬ ಲೇಖಕರಿಗೆ 'ಮೃತ್ಯು' ರಾಜಕಾರಣದ ಅರಾಜ್ಯಕತೆಯ ಬಗ್ಗೆ ಸೂಚಿಸುವನು.

ಮೃತ್ಯುಂಜಯ ಭಂಡರಾಜಕಾರಣಿಗಳ ಎಲ್ಲ ಸದ್ಗುಣಗಳಿಂದ ಕೆಲವು ಅಭ್ಯರ್ಥಿಗಳನ್ನು ಬೆಂಬಲಿಸಿ, ಅವರನ್ನು ಗೆಲ್ಲಿಸಿ, ಅವರಿಂದ ಹಣಪಡೆದು. ನಂತರ ತಾನು ನಿವೃತ್ತನಾಗುವ ಬಗೆಯನ್ನು ಅರಿತು ಆಸ್ಪತ್ರೆ ಸೇರಿದ್ದನು. ಕೊನೆಗೆ ಒಬ್ಬನನ್ನು ಬೆಂಬಲಿಸಿದ ಅವನಿಗೆ ಚುನಾವಣೆಯಲ್ಲಿ ಗೆಲ್ಲಲು ಸಹಾಯಮಾಡಿದ. ಅವನಿಂದ ಹಣಪಡೆದು, ನಂತರ ರಾಜಕಾರಣದಿಂದ ನಿವೃತ್ತಿ ಹೊಂದಿದನು. ಈ ಹಾಸ್ಯ ಲೇಖನವು ಇಂದಿನ ರಾಜಕಾರಣಿಗಳ ಸರ್ವ ಸದ್ಗುಣಗಳನ್ನು ವಿಡಂಬನಾತ್ಮಕ ಶೈಲಿಯಲ್ಲಿ ಚಿತ್ರಿಸಿದೆ. ಚುನಾವಣೆಗೆ ನಿಂತವನು ಮಾತ್ರ ಗೆಲ್ಲಬಹುದು, ಅಥವಾ ಸೋಲಬಹುದು. ಆದರೆ ಲೇಖಕರ ಪತ್ನಿ ತಮ್ಮ ಅಣ್ಣನ ಈ ರಾಜಕಾರಣದ ರಹಸ್ಯ ಅರಿಯಲು ಗಂಡನಿಗೆ ತಿಳಿಸಿದಾಗ. ಲೇಖಕರು 'ನನಗಾಗಿ ಅಲ್ಲದಿದ್ದರೂ – ಮುಂದಿನ ನಾಗರಿಕರಿಗೆ ಕಲಿಸಲು' ಕಲಿಯಬೇಕು ಎಂದು ಹೇಳುವ ಮಾತು ಅತ್ಯಂತ ಸೂಕ್ತವಾಗಿದೆ. ಈ ಲೇಖನ 'ವಿನೋದ' ಪತ್ರಿಕೆಯಲ್ಲಿ ಸೆಪ್ಟೆಂಬರ್ ೧೯೯೧ ರಲ್ಲಿ ಪ್ರಕಟನೆಗೊಂಡಿದೆ.

೧೦) **ಪೂರ್ ಪೂಲನ್** : 'ಚಂಬಲ್ ಕಣಿವೆ ರಾಣಿ' ಎಂದೇ ಪ್ರಖ್ಯಾತಿ ಪಡೆದ ಡಕಾಯಿತಿ ಅಷ್ಟೇನು ಸುಂದರಿ ಅಲ್ಲದಿದ್ದರೂ, ಡಕಾಯಿತಿಯಾಗಿ ಚಂಬಲ್ ಕಣಿವೆಯ ಠಾಕೂರರ ಎದೆ ಗುಂಡಿಯಲ್ಲಿ ಅವಲಕ್ಕಿ ಕುಟ್ಟಿದವಳು. ಅಂಥವಳು ಕೋರ್ಟಿನಲ್ಲಿ ಶರಣಾಗಿ ರಾಜಕಾರಣಕ್ಕೆ ಬಂದಳು. ಕೊನೆಗೆ ಎಂ. ಪಿ ಇದ್ದಾಗ ಕೊಲೆಯಾದಳು. ಈ ರೀತಿ ಅವಳ ಅಂತ್ಯವಾಯಿತು.

ಆದರೆ ಲೇಖಕರು ಹೆಂಗಸರ ಬುದ್ದಿನೇ ಹೀಗೆ, ಎಂದು ಹೇಳಿದಾಗ ತಮ್ಮ ಹೆಂಡತಿಗೆ ಎಲ್ಲಿಲ್ಲದ ಕೋಪ. ಆದರೆ ತಮ್ಮ 'ಸರಸು' ಅವಳನ್ನು ಮನೆಯಲ್ಲಿ ಪೂಲನ್ ಎಂದು, ಸಂಭೋಧಿಸುವ ಪರಿ ಹಾಸ್ಯಕ್ಕೆ ಎಡೆವುಂಟುಮಾಡುವುದು. ಆದರೆ ಅವಳ ಮದುವೆ ವಿಚಾರ ಜೊತೆಗೆ ಅವರು ಇವತ್ತಿನ ಹೆಣ್ಣುಮಕ್ಕಳು ಅತ್ತೆಯ ಕೈಯಲ್ಲಿ ಮೂದಲಿಕೆ, ವರದಕ್ಷಿಣೆ ಹೆಸರಿನಲ್ಲಿ 'ಜೀವಂತ ದಹನ' ಆಗುವುದು ಬೇಡವೆಂದು ಅವಳು ಮದುವೆ ಆಗಲಿಕ್ಕೆ ಒಪ್ಪಲಿಲ್ಲ ಎನ್ನುವ ಮಾತು ಪೂಲನಗೆ ಎಷ್ಟು ಸೂಕ್ತ ಎನ್ನುವುದು ವಿಚಾರಕ್ಕೆಡೆ ನೀಡಿದೆ. ಅತ್ತೆಯ ಕೈಯಲ್ಲಿ ನಡೆಯುವುದು ಸೊಸೆಯ ಪಾಡು ಚಿಂತಾಜನಕವಾದುದ್ದು. ಆದರೆ ಸರಸು ಎಂಟೆಗೆ ಇದ್ದರವರು. ಮಾತ್ರ ಅತ್ತೆಯ ಕೈಯಲ್ಲಿ ನಡೆಯುವರು ಎನ್ನುವ ಮಾತಿಗೆ ಲೇಖಕರು 'ಪೂರ್ ಪೂಲನ್' ಎಂದು ಉದ್ಗಾರ ತೆಗೆಯುವರು. ಆದರೆ ಆಧುನಿಕವಾಗಿ

ಅತ್ತೆಯ ಕಾಟ ಕಮ್ಮಿ ಆಗಿದೆ. ಕೆಲವೊಬ್ಬರು ದುಷ್ಟ ಅತ್ತೆಗಳು ನಮಗೆ ಸಿಗುವರು. ಹೈಕೋರ್ಟ ಕಾನೂನು ಅತ್ತೆಯು ಸೊಸೆಯನ್ನು ಹೊಡೆಯಬಹುದೆಂದು ದೀರ್ಘ ತೀರ್ಪು ನೀಡಿದೆ' ಇದು ಅತ್ತೆಯ ಗತ್ತಿಗೆ ಮತ್ತಷ್ಟು ಗರಿ ಮೂಡಿಸಿದೆ. ಈ ಲೇಖನ 'ಪ್ರಜಾವಾಣಿ' ಮಾರ್ಚ ೧೪, ೧೯೯೪ ರಲ್ಲಿ ಪ್ರಕಟಣೆಗೊಂಡಿದೆ.

೧೧) **ಬ್ಯಾಡಂದ್ರೂ ಯಾಕ ಬೇಡ್ತಿ?** : ಈ ಪ್ರಬಂಧ ಚಂಡಿ–ಉದ್ದಾಲಕನ ಕತೆಯನ್ನು ನೆನಪಿಸುತ್ತದೆ. 'ಬ್ಯಾಡಂದ್ರೂ ಬಿಡಾಂಗಿಲ್ಲಾ, ಮಾಡ ಅಂದ್ರೆ ಮಾಡಾಂಗಿಲ್ಲಾ' ಇಂಥ ಎಡವಟ್ಟು ಜನ ನಮಗೆ ಸಮಾಜದಲ್ಲಿ ಸಿಗುವರು.

'ಮಾಸ್ತರಿಕೆ ಬಹಳ ಕನಿಷ್ಠ, ಮಧಾರಿ ವಿದ್ಯೆಯಿಲ್ಲದಿದ್ದರೂ ಗರಿಷ್ಠ', ಎನ್ನುವ ಉಕ್ತಿ ಇಲ್ಲಿದೆ. ಆದರೆ 'ಜ್ಞಾನಿ ಲೋಕಪೂಜ್ಯತಂ' ಎನ್ನುವಂತೆ ಪಂಡಿತ, ತತ್ವಜ್ಞಾನಿ ಜಗತ್ತನ್ನು ಗೆಲ್ಲಬಲ್ಲನು. ದಡ್ಡ, ಮೂರ್ಖ, ತಮ್ಮ ಓಣಿಗೆ ತಾನೇ ಸಿಂಹ ಇದ್ದ ಹಾಗೆ ಹೊರತು ಹೊರಗೆ ಅತ ನಾಯಿಕುನ್ನಿ.

'ಬೇಡ್ತಿಯೋಜನೆ' ಬಗ್ಗೆ ಪರಿಸರವಾದಿಗಳು ಬೇಡವೆಂದರೆ, ಸ್ವಾರ್ಥ ರಾಜಕಾರಣಿಗಳು ಬೇಡ್ತಿಯೋಜನೆ ಇರಲಿ ಎನ್ನುವರು. ದುಷ್ಟರನ್ನು ಹೊಗಳಿದರೆ ಇಷ್ಟು ಸಂತೋಷಪಡುವರು ಎಂಬ ನೀತಿ ಈ ಪ್ರಬಂಧದಿಂದ ಓದುಗರ ಗಮನಕ್ಕೆ ಬರುವುದು.

೧೨) **ಬ್ಯಾಗು ಸೇರಿದ ಬೇತಾಳ** : 'ವಿಕ್ರಮರಾಜ ಮಾತ್ರ ಬೇತಾಳನ್ನು ತಲೆ, ಬೆನ್ನ ಮೇಲೆ ಹೊತ್ತುಕೊಂಡು ಹೋಗಿ, ಕಥೆ ಕೇಳಿ ಕೊನೆಗೆ ಉತ್ತರ ಹೇಳುದರಾಗ ಅದು ಗಿಡಏರಿ ಕೂಡುವ ಕಥೆ' ವಿಕ್ರಮ ಬೇತಾಳದಲ್ಲಿವೆ. ಆದರೆ ಆಧುನಿಕವಾಗಿ ಈ ಬೇತಾಳ ಬಗ್ಗೆ ನಂಬುವ ಸ್ಥಿತಿಯಲ್ಲಿ ಇಲ್ಲ ನಾವೆಲ್ಲರೂ/ಜನಾಂಗ.

ಆದರೆ ಪರೀಕ್ಷೆ ಬರೆಯಲು ವಿದ್ಯಾರ್ಥಿಗಳು ಪ್ರತಿನಿತ್ಯ ಸ್ಕೂಲ (ಶಾಲೆ)ಗೆ ಹೋಗಿ. ಪಾಠ ಕೇಳಿ, ಅಭ್ಯಾಸ ಮಾಡಿ ಪಾಸಾಗಬೇಕು ಹೊರತು. ವಾಮಮಾರ್ಗದಿಂದ ಪಾಸಾಗುವುದು ಅಷ್ಟು ಸೂಕ್ತವಲ್ಲ. 'ಕೇವಲ ಪಾಸಾಗುವರು ಹೊರತು ಜ್ಞಾನ ಅಲ್ಲಿ ಶೂನ್ಯ'. ಆದರೆ ಅಂಥವರು ಸಮಾಜದಲ್ಲಿ ಮುಖಂಡರಾಗಿ ಮೆರೆಯುವರು. ವಿಕ್ರಮ ಇವತ್ತಿನ ಶಿಕ್ಷಣ ನೀತಿ, ಮಕ್ಕಳಿಗೆ ಪಾಲಕರು ಒಳ್ಳೆಯ ಶಿಕ್ಷಣ ಕೊಡಿಸಬೇಕಾದರೆ ಪಡು ಪಾಡು ಅಷ್ಟಿಷ್ಟಲ್ಲ. ಕಾನ್ವೆಂಟ ಶಿಕ್ಷಣ ಎಲ್ಲದರಲ್ಲಿ ಶಿಸ್ತು ಇದೆ. ಆದರೆ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣ ಪಡೆದ ಮಕ್ಕಳು, ವರ್ಷಪೂರ್ತಿ ಪಠ್ಯವಿಲ್ಲದೇ, ಪರೀಕ್ಷೆ ಬರೆಯುವ ಪರಿ ನಮ್ಮ 'ಆಡಳಿತಕ್ಕೆ ಹಿಡಿದ ಕೈಗನ್ನಡಿಯಾಗಿದೆ'.

ನಮ್ಮ ಶಿಕ್ಷಣ ವ್ಯವಸ್ಥೆ ಹದಗೆಡಲು ಕೇವಲ ಸರ್ಕಾರ, ಅಷ್ಟೆ ಕಾರಣವಲ್ಲ. ಪಾಲಕರು, ಶಿಕ್ಷಕರು, ಪುಸ್ತಕ ಮಾರಾಟಗಾರರು, ವಿತರಕರು, ವಿದ್ಯಾರ್ಥಿಗಳು ಅಷ್ಟೇ ಸಮಪಾಲದಾರರು ಆಗಿದ್ದಾರೆ. ಆದ್ದರಿಂದ ವಿದ್ಯಾರ್ಥಿಗಳಿಗೆ ಪಠ್ಯಕ್ಕಿಂತ ಗೈಡುಗಳು ಮಾರ್ಗದರ್ಶಿಗಳಾಗಿ ಕಾರ್ಯನಿರ್ವಹಿಸಿವೆ. ಒಂದು ವಿಪರ್ಯಾಸವೆಂದರೆ ಪಠ್ಯವಿಲ್ಲದೇ ಮಕ್ಕಳು ಪಾಸಾಗಿ ಮುಂದಿನ ಕ್ಲಾಸಿಗೆ ಹಾಜರಾಗುವುದು.

'ಹಸಿಯಾದರೇನು, ಬಿಸಿಯಾದರೇನು ಅಂತೂ, ಇಂತೂ ಹೊಟ್ಟೆ ತುಂಬಿತಲ್ಲ, ಅಷ್ಟೇ ಸಾಕು'. ಎನ್ನುವ ಲೇಖಕರ ಮಾತು ಸೂಕ್ತ. ಈ ಪ್ರಬಂಧ 'ಕನ್ನಡಮ್ಮ'ದಲ್ಲಿ ಮಾರ್ಚ ೭ ರಂದು, ೧೯೯೩ ರಂದು ಪ್ರಕಟಣೆಗೊಂಡಿದೆ.

೧೩) **ಟೊಂಯ್ ಟೊಂಯ್ ಮಾತು** : ಈ ಹಾಸ್ಯ ಪ್ರಬಂಧ ಸಂಕಲನಗಳ ಪುಸ್ತಕ ಶೀರ್ಷಿಕೆ 'ಟೊಂಯ್ ಟೊಂಯ್ ಮಾತು'. ಈ ಪ್ರಬಂಧವು ಸಂಕಲನದ ಕೊನೆಯ ಹಾಸ್ಯ ಪ್ರಬಂಧವಾಗಿದೆ.

ನಾವು ದಿನನಿತ್ಯ ಒಂದೇ ಶಬ್ದವನ್ನು ಎರಡು ಸಾರಿ ಉಚ್ಚರಿಸಿ ಅರ್ಥವನ್ನು ಹೆಚ್ಚಿಸುವ ಒಂದು ಶಬ್ದಕ್ಕೆ ಅನುಕರಣವಾಚಕ ಎಂದು ಕರೆಯುತ್ತೇವೆ. ಅಂಥ ಹಲವಾರು ಶಬ್ದಗಳು ಈ ಪ್ರಬಂಧದಲ್ಲಿ ಸ್ಥಾನಪಡೆದಿವೆ.

'ಟೊಂಯ್ ಟೊಂಯ್ ಮಾತು'ಗಳು ಎಂದರೆ – ಶಾಲೆಯಲ್ಲಿ ಮಾಸ್ತರರು ಕತೆ ಹೇಳಿದ ಶಬ್ದಗಳನ್ನು ಈ ರೀತಿಯಾಗಿ ಹೇಳಬಹುದು. 'ಲಕಾಲಕಾ ಹೊಳೆಯುವಂಥಾ ಕುದುರಿ', 'ಝುಕ್ ಝುಕ್ ಅಂತ ಸವಾರಿ ಮಾಡು', 'ಭೊಂವ್ಯ್ ಅಂತ ಓಡಾಡು', 'ಸೊಂಯ್ ಅಂತ ಗಾಳಿ ಬೀಸಿತು', 'ರಪಾರಪಾ ಮಳೆ', 'ಕತ್ತಲಗವ್ವ', 'ಬುಕ್ರ್ ಅಂತ ಹಾರು', 'ಗಡಾ ಗಡಾ ನಡುಗಿದ', 'ಎದಿ ಡವಾ ಡವಾ ಅಂತು', ಈ ಎಲ್ಲ ಉದಾಹರಣೆಯ ಪದಗಳನ್ನು ನೋಡಿದಾಗ ಭಾಷೆಯಲ್ಲಿ ಅರ್ಥವನ್ನು ಇಮ್ಮಡಿಗೊಳಿಸಲು ಒಂದು ಪದವನ್ನು ಎರಡೆರಡು ಸಲ ಬಳಸುವ ಪದ್ಧತಿ ನಮಗೆ ವ್ಯಾಕರಣದಲ್ಲಿ ಕಂಡು ಬರುವ ಸಂಗತಿಯಾಗಿದೆ.

ಇಂಥ ಪದಗಳ ಬಳಕೆಯಿಂದ ನಾವು ಹೇಳಬೇಕಾದ ಮಾತುಗಳಿಗೆ ಪರಿಣಾಮಕಾರಿಯಾಗುವಲ್ಲಿ, ಸಹಾಯಕಾರಿಯಾಗಿವೆ. ಪ್ರಾದೇಶಿಕ ಆಡುಭಾಷೆಯ ಸೊಗಡು ಇವುಗಳಲ್ಲಿವೆ. ನಮಗೆ ತಿಳಿಯಲಾರದಂತೆ ಈ ಮಾತುಗಳು ನಮ್ಮಲ್ಲಿ ಆಗಾಗ ಮಿಂಚಿ ಮಾಯವಾಗುತ್ತವೆ. ನಿಘಂಟಿನಲ್ಲಿ ಇವುಗಳ ಅರ್ಥ ದೊರೆಯದೇ ಇರಬಹುದು. ಆದರೆ ಅವುಗಳಿಗೆ ಅರ್ಥ ಕೊಡುವ ತಾಕತ್ತು ಅವುಗಳಿಗಿದೆ.

ಈ ಮಾತುಗಳು ಪಾಯಸದಲ್ಲಿ ಸಕ್ಕರೆ ಬೆರಿಸಿದಂತೆ ರುಚಿಕಟ್ಟಾಗಿ, ನಂತರ ಊಟದ ಜೊತೆ ಉಪ್ಪಿನಕಾಯಿ ಅಂತೆ ಬಳಕೆ ಆಗುತ್ತವೆ.

ಸರ್ವಜ್ಞನ, ಈ ರೀತಿ ಮಾತಿನ ಮಹತ್ವತೆ ಬಗ್ಗೆ ಹೇಳುವನು. 'ರಸಿಕನಾಡಿನ ಮಾತು ಶಶಿ ಉದಿಸಿ ಬಂದಂತೆ'. ಹೇಳಿದ ಕೆಲಸ ಮಾಡದೇ ಬರುವವರನ್ನು 'ಆಹಾ, ದೊಡ್ಡ ಬಾಜೀರಾವ! ಟಿಂಗ್ ಟಿಂಗ್ ಅಂತ ಬಂದ್...' ಎಂದು ಅಣಕಿಸುತ್ತೇವೆ. ಹಾಗೆಯೇ ಢಣ ಢಣ ಗಂಟೆ, ಮಿರಿ ಮಿರಿ ಮಿಂಚು, ತಪಾ ತಪಾ ತೊಯ್ದವು, ರಣರಣ ಬಿಸಿಲು, ಜಿಟಜಿಟಿ ಮಳೆ – ಎಂಬ ಮಾತುಗಳು ಕೇಳಲು ಹಾಗೂ ಹೇಳಲು ಅದೆಷ್ಟು ಸೊಗಸು!

ಈ ರೀತಿಯಾಗಿ ನಮ್ಮ ದಿನನಿತ್ಯದ ವ್ಯವಹಾರದಲ್ಲಿ 'ಟೊಂಯ್ ಟೊಂಯ್ ಮಾತು'ಗಳ ಬಳಕೆ ಸಾಕಷ್ಟು ಪ್ರಮಾಣದಲ್ಲಿ ಆಗುತ್ತದೆ. ಇಂಥ ಮಾತುಗಳು ನಮ್ಮ ಜನಪದರಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣುತ್ತೇವೆ.

'ನೀವು ನನಗೆ ಟೊಂಯ್ ಟೊಂಯ್ ಮಾತುಗಳಿಂದ ಒಂದ್ಸವನ ವಟಾವಟಾ ಹಚ್ಚಿ, ತಲಿ ಚಿಟ್ಟ ಹಿಡಸ್ಯಾನ ನೀವು ನನ್ನ ಮೇಲೆ ಪ್ರಯೋಗ ಮಾಡುವದಕ್ಕಿಂತ ನಾನು ಗಪ್-ಚಿಪ್‌ಂತ ದೂರ ಸರೀತಿನಿ, ನಾನು ಮಾತಾಡಿದ್ದು ಕೇಳಿ, ನಿಮ್ಮ ಮುಖದ ಮ್ಯಾಲ ಹೂ ನಗೆ ಅರಳಿ, ನೀವು ನಕ್ಕಿರಲೂಬಹುದು. ನೀನು ಕೊಕ್ ಕೊಕ್ ಅಂತ ನಕ್ಕಿದ್ದಾದ್ರ..... ನನ್ನ ಪ್ರಯತ್ನ ಸಾರ್ಥಕಂತ ತಿಳ್ಕೋತೀನಿ', ಎಂದು ಹುಲಗಬಾಳಿಯವರ ಈ ಹೇಳಿಕೆ ಅತ್ಯಂತ ಸೂಕ್ತವಾದುದು.

ಈ ಒಟ್ಟು ೧೩ ಪ್ರಬಂಧ ಬರಹಗಳಿಂದ ನಮ್ಮನ್ನು ಒಂದು ಹೊಸಲೋಕಕ್ಕೆ ಒಯ್ದ ಅನುಭವ ಉಂಟಾಯಿತು. ಲೇಖಕರ ಪ್ರಥಮ ಪ್ರಮಾದವಾದರೂ ಓದುಗರನ್ನು ತನ್ನ ಎಡೆ ಸೆಳೆಯುವಲ್ಲಿ ಯಶಸ್ವಿಯಾಗಿದೆ.

### ಉದರೋಪನಿಷತ್ :

ಹುಲಗಬಾಳಿಯವರ ದ್ವಿತೀಯ ಕೃತಿ. 'ಹದಿನಾಲ್ಕು' ಹಗುರ ಬರಹಗಳು, ಪ್ರಸ್ತುತ ಪ್ರಬಂಧ ಸಂಕಲನದಲ್ಲಿ ಅಡಕವಾಗಿವೆ. ಈ ಕೃತಿಯನ್ನು ವಿಮೋಚನಾ ಪ್ರಕಾಶನ, ಅಥಣಿ, ಇವರಿಂದ ಪ್ರಕಟನೆಗೊಂಡಿದೆ. ಬ. ಗಿ. ಯಲ್ಲಟ್ಟಿ ಅವರು ಈ ಕೃತಿಗೆ 'ಮುನ್ನುಡಿ' ಬರೆಯುವುದರೊಂದಿಗೆ 'ಅಧ್ಯಾತ್ಮದ ಒಲವುಳ್ಳವರಿಗೆ ಈಶಾವಾಸ್ಯೋಪನಿಷತ್ತು ಇಷ್ಟವಾದರೆ, ಇಪ್ಪತ್ತನೆಯ ಶತಮಾನದ ಮಾನವರಿಗೆ ಉದರೋಪನಿಷತ್ತು ಇಷ್ಟವಾದುದು. "ಹೊಟ್ಟೆಗೆ ಎಲ್ಲ ಕ್ಷೇತ್ರಗಳಲ್ಲಿ ಅಗ್ರಪಟ್ಟ, ಹಾಸ್ಯದ ಕಾರಂಜಿಯ ಈ ಕೃತಿಯಲ್ಲಿ ಪುಟಿಯುತ್ತಿದೆ".

ಬಿ. ಆರ್. ಪೋಲಿಸ ಪಾಟೀಲರು ಹುಲಗಬಾಳಿಯವರ 'ಉದರೋಪನಿಷತ್' ಹರಟೆ ಬಗ್ಗೆ ಈ ರೀತಿ ಅಭಿಪ್ರಾಯವ್ಯಕ್ತಪಡಿಸುತ್ತಾರೆ. 'ಹೊಸಗನ್ನಡ ಗದ್ಯ ಬರವಣಿಗೆಯ ಮೂಗಿಗೆ ನತ್ತಿದ್ದಂತೆ. ಇದ್ದು ಇಲ್ಲದಂತಿರುವ ನತ್ತು ಮೂಗನ್ನು ಸಿಂಗರಿಸುತ್ತದೆ. ಅಸ್ತಿತ್ವಕ್ಕೆ ಬೆಲೆ ತರುತ್ತದೆ'.

ಶ್ರೀ ವ್ಹಿ. ಎಸ್. ಮನವಾಡೆ, ನಿರ್ದೇಶಕರು ವಿಮೋಚನಾ ಪ್ರಕಾಶನ – ಇವರ ಈ ಕೃತಿ ಬಗ್ಗೆ ತಮ್ಮ ಪ್ರಕಾಶನ ಲೇಖನದಲ್ಲಿ ಈ ರೀತಿ ಅಭಿಪ್ರಾಯವ್ಯಕ್ತಪಡಿಸುವರು – " ಈ ಕೃತಿಯು ನಮ್ಮ ೨೩ನೆಯ ಪ್ರಕಾಶನವಾಗಿದ್ದು, ೫೦ನೆಯ ಸ್ವಾತಂತ್ರ್ಯೋತ್ಸವದ ಸಂಭ್ರಮ, ಅಸ್ಪೃಶ್ಯತಾ ನಿವಾರಣಾ ಸಪ್ತಾಹವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ಪ್ರಕಟಿಸುತ್ತಿರುವುದು ಒಂದು ವಿಶೇಷ. ಉಳಿದ ಕೃತಿಗಳಿಗಿಂತ ಇದು ಭಿನ್ನ ಸಾಹಿತ್ಯ ಪ್ರಕಾರವಾಗಿದ್ದು, ಮನುಷ್ಯನಿಗೆ ಮನರಂಜನೆಯೇ ಜೀವನ ಸಂಜೀವಿನಿ, ಅದು ನಮ್ಮ ಬದುಕಿನ ನಿತ್ಯ ವ್ಯವಹಾರದಲ್ಲಿ ತುಂಬಿ ಕೊಂಡಿದೆ".[೬]

'ಉದರೋಪನಿಷತ್' ತನ್ನ ಉದರದಲ್ಲಿ 'ಹದಿನಾಲ್ಕು' ಹಗುರ ಬರಹಗಳನ್ನು ಅಡಗಿಸಿಕೊಂಡಿದೆ. 'ಉದರೋಪನಿಷತ'ನಿಂದ ಪ್ರಾರಂಭವಾಗಿ 'ಹಳವಂಡ'ಗಳವರೆಗೆ ಮುಕ್ತಾಯವಾಗುತ್ತದೆ.

ಅವು ಇಂತಿವೆ :

೧) ಉದರೋಪನಿಷತ್

---

೬ 'ಉದರೋಪನಿಷತ್' (ಸಹೃದಯರ ಹೃದಯಳ) – ಮಲ್ಲಿಕಾರ್ಜುನ ಹುಲಗಬಾಳಿ – ಪುಟ XI

೨) ಕುಳಿತೊದದೆಯುಂ

೩) ಕಿಚನ್-ಪಾಲಿಟಿಕ್ಸ್

೪) ಪಿ.ಎಂ. ಹುದ್ದೆಯೂ ...

೫) ಜಾತ್ರೆ: ಕಂಡದ್ದು – ಕೊಂಡದ್ದು.

೬) ಕತ್ತೆ (ಪ್ರ)ಸಂಗ

೭) ಅಷ್ಟ ನವಪಕ್ಷಗಳ ವೃತ್ತಾಂತವು.

೮) ಪತಿ-ಸಿಂಪತಿ

೯) ಎಲ್ಲೆಲ್ಲಿಯೂ ಸಲ್ಲುವರಯ್ಯಾ

೧೦) ಮೌಲ್ಯಮಾಪನ

೧೧) ಗಡ್ಡ ಬಿಡಿ ಗಡ್ಡ

೧೨) ರೂಢಾರೂಢರು

೧೩) ಹೆಂಡತಿಯನ್ನು ಕರೆಯುವ ಪರಿ

೧೪) ಹಳವಂಡಗಳು

**ಉದರೋಪನಿಷತ್ :**

ಲೇಖಕರು ಮಾಸ್ತರು ಸೈನ್ಸ ಕ್ಲಾಸಿನಲ್ಲಿ 'ಈ ಮನುಷ್ಯ ದೇಹದ ಅತ್ಯಂತ ಉಪಯುಕ್ತ ಅಂಗ ಯಾವುದು?' ಆಗ ಎಲ್ಲರೂ ಒಂದೊಂದು ರೀತಿ ಉತ್ತರ ಹೇಳಿದರು. ಮಲ್ಲಿಕಾರ್ಜುನ ಹುಲಗಬಾಳಿಯವರು 'ದೇಹಕ್ಕೆ ಉದರವೇ ಸದಾ ಆಧಾರ್‍ರ‍್ರಾ... ಅಂತಾ ರಾಗವಾಗಿ ಹೇಳಿದರು. ಹುಡುಗ್ರೆಲ್ಲಾ ಹೊಟ್ಟೆ ಹರಿಯುವಂಗ ಬಿದ್ದ ಬಿದ್ದ ನಕ್ಕರು. ಪರಂಥೂ, ಗುಡ್ಡದ ಹೊಟ್ಟೆಯ ಆ ಗುಂಡಪ್ಪ ಮಾಸ್ತರ್‍ರು ಅಪಾರ್ಥ ಭಾವಿಸಿಕೊಂಡ್ರು, ಉದರಂತ ಉದರ್‍ರಾ... ಹಲ್ಲ ಉದರಸೇನು ಹುಷಾರ...! ಅಂತ ಅನ್ನೊಂತ ನಾಲ್ಕ ಛಡಿ ಏಟು ಬಕ್ಷಿಸ ನೀಡಿದ್ದರು.'[೭]

'ಹೊಟ್ಟೆಗೆ ಹಿಟ್ಟಿಲ್ಲದಿದ್ದರೆ, ಬದುಕೀತು ಹೇಗೆ ಈ ಜೀವ'. ಅದಕ್ಕಾಗಿ ನಮ್ಮೆಲ್ಲರ ನಿದ್ದೆಗೂ-ಬುದ್ದಿಗೂ ಈ ಮುದ್ದೆಯೇ ಮೂಲಾಧಾರ. ಮುದ್ದೆಗಂತೂ ಉದರವೇ ಉಗ್ರಾಣ. ಇಂಥ ಉದರ ನಿಮಿತ್ತ್ಯಕ್ಕಾಗಿಯೇ ನಾವು-ನೀವು ಬಹುಕೃತ ವೇಷಧಾರಿಗಳಾಗಿರೋದು. ಬರೀ ಒಂದು ಗೇಣುದ್ದ ಹೊಟ್ಟೆಗೆ ಇಡೀ ಬದುಕನ್ನೆ ಸವೆಸುತ್ತೇವೆ.

ಹೊಟ್ಟೆಗಾಗಿ ಏನೆಲ್ಲ ಹಗರಣ ಮಾಡುತ್ತಾರೆ. ಯಾವತ್ತೂ ತಿನ್ನುವವರು ಹೊಟ್ಟೆಬಾಕರು. ಹೊಟ್ಟೆಯ ಸ್ಥಾನವನ್ನು ನಮ್ಮ ದೇಶದ ರಾಜ್ಯಗಳ ಉದಾಹರಣೆ ನೀಡುತ್ತಾ ಅದರ ಸ್ಥಾನವನ್ನು ಸೂಚಿಸುವರು. 'ಹೊಟ್ಟೆಗೆ ಇಲ್ಲದಿದ್ದರೆ ಮೆದುಳಿಗೆ ರಕ್ತ ಪೂರೈಕೆ ಕಡಿಮೆಯಾಗಿ ಕೋಲಾಹಲ ಉಂಟಾಗುವುದು'. ನಮ್ಮ ಸಾಹಿತ್ಯದಲ್ಲಿಯೂ ಆಗಾಗ ಉದರದ ಬಗ್ಗೆ ಪ್ರಸ್ತಾಪ ಬಂದಿದೆ. ಉದಾ : "ಒಡಲು ಗೊಂಡವ ಹಸಿವ, ಒಡಲು ಗೊಂಡವ ಹುಸಿವ, ಒಡಲುಗೊಂಡವನೆಂದು ಜಡಿದು

---

೭. 'ಉದರೋಪನಿಷತ್' – ಮಲ್ಲಿಕಾರ್ಜುನ ಹುಲಗಬಾಳಿ – ಪುಟ ೧

ನುಡಿಯದಿರು, ನೀನೊಮ್ಮೆ ಒಡಲಗೊಂಡು ನೋಡು" ಎಂದು ಜೇಡರ ದಾಸಿಮಯ್ಯನ ವಚನ. ಇಲ್ಲಿ ಸೂಕ್ತವಾಗಿದೆ.

ಬಿ.ಜಿ.ಎಲ್. ಸ್ವಾಮಿ, ಪರಮೇಶ್ವರ ಭಟ್ಟರು, ಬೀಚಿ ಮುಂತಾದವರು ಉದರ ಬಗ್ಗೆ ಉದಾರವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು.

'ವಿಠ್ಠಪ್ಪಾ' ಪೋಲಿಸ ಆಗಿದ್ದು ತಿನ್ನುವುದರಲಿ ಪ್ರವೀಣ. ಆತನನ್ನು ಕಂಡಾಗ ವಿಠ್ಠಪ್ಪಾ ಬದಲಿಗೆ 'Eat' ಪ್ಪಾ ಎಂದು ಕರೆಯುವುದು ಹಾಸ್ಯವುಂಟು ಮಾಡಿದೆ.

ಹೊಟ್ಟೆ ಮಹತ್ವದ ಬಗ್ಗೆ ಅವರು ಹೊಟ್ಟೆಯಿಲ್ಲದಿದ್ದರೆ ಪ್ಯಾಂಟು, ಸೀರೆ ಉಡಲು ಜನರು ಎದೆಗೆ ಕಟ್ಟುವರೆ? ಎಂದು ಲೇಖಕರ ಮಾತು ಸೂಕ್ತವಾಗಿದೆ.

ಈಗಿನ ಹುಡುಗಿಯರು ಡೈಟಿಂಗ್, ವಾಕಿಂಗ್, ಜಾಗಿಂಗದಿಂದ ತೆಳ್ಳಗಾಗಲು ಪಡುವ ಪಾಡು ಅಷ್ಟಿಷ್ಟಲ್ಲ. ತಳೋದರಿಯಾದ ಸುಂದರ ದ್ರೌಪದಿ ಇದ್ದಾಗಲು ಭೀಮಸೇನನೇಕೆ ಆ ಉಗ್ರಾಣ-ಉದರದ ಹಿಡಿಂಬೆಯ ಕೈ ಹಿಡಿದದ್ದು? ತನ್ನಂತಿರುವವರೆಲ್ಲ ಚೆನ್ನದಂತೆ ಎಂಬ ವೃಕೋದರ ಭೀಮನ ಭಾವನೆ ಆಗಿರಲೂಬಹುದಲ್ಲ! ಏನಂತೀರಿ?.

ಲೇಖಕರು ಇಷ್ಟೇಲ್ಲಾ ಹೇಳಿದರೂ "ಅವರು ಹೊಟ್ಟೆ ಬಾಕು ಪ್ರಾಣಿ" ಅಲ್ಲ ಎಂದು ಪ್ರಸ್ತಾಪಿಸುವರು. 'ಏನಾದರೂ ತಿನ್ನುತ್ತಿರು ತಮ್ಮ' ಎಂದು ಕ್ಷಮೆ ಕೇಳಿ, ಇಂದಿಲ್ಲ ನಾಳೆ ಉದರಾಧೀಪತಿ ಆದೆನೆಂದು ಆಶಾವಾದಿಯಾಗಿದ್ದೇನೆ. ಈ ಪ್ರಬಂಧ 'ಕರ್ಮವೀರ' ದೀಪಾವಳಿ ಸಂಚಿಕೆಯಲ್ಲಿ ೧೯೯೬ ರಲ್ಲಿ ಪ್ರಕಟಗೊಂಡಿದೆ.

**ಕುಳಿತೋದದೆಯುಂ** : "ಓದಿದಾವ್ರಿಗೆ ಓಣಿ ಸಿಗಲಿಲ್ಲ. ಹಾಡಿದಾವ್ರಿಗೆ ಹಾದಿ ಸಿಗಲಿಲ್ಲಂತೆ" ಗಾದೆಮಾತು ಇದೆ. ಅದರಂತೆ ವಿಠ್ಠು ಪರೀಕ್ಷೆ ಬಂದರೂ ಓದಲಿಕ್ಕೆ ಮನಸ್ಸು ಮಾಡಲಿಲ್ಲ. ಅಗ ಕುಳಿತು ಓದದೆ ಪಾಸು ಆಗುವುದು ಹೇಗೆ ಎಂಬ ಪ್ರಶ್ನೆ ಲೇಖಕರದು. ಆದರೆ ಲೇಖಕರ ಪತ್ನಿ ಕಾಫಿ ಮಾಡಿ ಪಾಸಾಗಬೇಕು ಎಂದು ಉತ್ತರಿಸುವರು. ಈ ಹಾಸ್ಯ ಲೇಖಕರು ಈಗಿನ ಶಿಕ್ಷಣದ ವ್ಯವಸ್ಥೆಯನ್ನು ಕುರಿತು ವ್ಯಂಗ್ಯ ಮಾಡಿದ್ದಾರೆ.

"ಹೇಳಿ ಕೇಳಿ ಇದು ನಕಲಿ ಕ್ಯಾಮರ ಕಾಲ ತಿಳೀತೇನಪ್ಪಾ ಅಂಡರಸ್ಟಾಂಡಾ...?" ಎಂಬ ವಿಠ್ಠಲ ಪ್ರಶ್ನೆಗೆ ಲೇಖಕರು. 'ಕುಳಿತೋದದೆಯಂ ಕಾರ್ಯ ಫಲಾನುಭವಿಗಳ ನಾಡಲ್ಲವೆ?' ಎಂದು, ಈ ಪ್ರಬಂಧವನ್ನು 'ಸುಧಾ' ವಾರಪತ್ರಿಕೆಯಲ್ಲಿ ೨೩ ಜುಲೈ ೧೯೯೫ ರಲ್ಲಿ ಪ್ರಕಟಗೊಂಡಿದೆ.

**ಕಿಚನ್ ಪಾಲಿಟಿಕ್ಸ್** : ಇದು ಚಿಕನ್ ಪಾಲಿಟಿಕ್ಸ್ ಅಲ್ಲ... ಕಿಚನ್ ಪಾಲಿಟಿಕ್ಸ್ ಅರ್ಥಾರ್ಥ ಅಡಿಗೆ ಮನೆ ರಾಜಕೀಯ. 'ಗಲಿ ಕಾ ಶೇರ್' ರಾಮಣ್ಣಾ, ಈಗ ಪುನಃ ವಿವಾಹವಾಗಿ ನಗೇಪಾಟಲಿಗೆ ಎಡೆಯಾಗಿದ್ದಾನೆ. ಆತನಿಗೆ ಕಿಮ್ಮತ್ತಿಲ್ಲ. ಆತನ ಹೆಸರು ಹೇಳಿ ಮಕ್ಕಳು ಸುಖವಾಗಿದ್ದಾರೆ. ಅಂದರೆ ಆಧುನಿಕ ಮಹಿಳೆ ಕೇವಲ ನಾಲ್ಕು ಗೋಡೆ ಮಧ್ಯದಲ್ಲಿ ಇರಲಾರದೆ ಅವಳು ಎಲ್ಲ ರಂಗಗಳಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಂಡಿರುವಳು.

ಇಲ್ಲಿ ಲೇಖಕರ-ಸರಸು (ಹೆಂಡತಿ) ಮಧ್ಯ ಎಂಥ ಸಾಮರಸ್ಯ ಇದೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

ಈ ಪ್ರಬಂಧವನ್ನು 'ಲೋಕದರ್ಶನ' ದೀಪಾವಳಿ ವಿಶೇಷಾಂಕದಲ್ಲಿ ೧೯೯೫ರಲ್ಲಿ ಪ್ರಕಟಿಸಲಾಗಿದೆ.

**ಪಿ. ಎಂ. ಹುದ್ದೆಯೂ ಮತ್ತು ರಾಗಿ ಮುದ್ದೆಯೂ :**

'ಪಾರ್ಲಿಮೆಂಟ್ ಭವನದ ಮುಂದೆ ರಸ್ತೆಯಲ್ಲಿ ರಾಜಕಾರಣಿಗಳ ಮಾನವ ರೂಪಿಗಳ ಬೀದಿ ಸರ್ಕಸ್' ಎದ್ದು ಕೂಡಲೇ ಲೇಖಕರಿಗೆ ದರ್ಶನ ನೀಡಿದ್ದರು.

'ನಮಸ್ಕಾರೀ..' ಎಂದು ಕೈ ಮುಗಿದಾಗ.

'ಕರ್ನಾಟಕದವರೇನ್ರೀ?' ಎಂದು ಗೌಡರು ಪ್ರಶ್ನೆ.

"ಅವರಿಗೆ ಲೇಖಕರು ಹ್ಯಾಂಗ ಅದ್ರೀ... ಪ್ರಧಾನಿ ಪಟ್ಟಾ? ಎಂದು ಕೇಳಿದಾಗ. 'ಏನೂ ಸುಖಾ ಇಲ್ಲಾರಿ... ಈ ಪಿ. ಎಂ. (ಪ್ರಧಾನಿ)ಗಿಂತ ಆ ಸಿ. ಎಂ. ಆಗಿರೋದೇ ವಾಸಿ ಕಂಡ್ರಿ...' ಎಂದು ಉತ್ತರಿಸಿದರು".[೮]

'ಹೊತ್ತು ಹೊತ್ತಿಗೆ ಮುದ್ದೆ ಇಲ್ಲಾ, ಮುದ್ದೆ ಇಲ್ದೆ ಇದ್ರೇ ಬುದ್ದೀನೂ ಇಲ್ಲಾ...?' ಪಿ. ಎಂ ಗಿಂತ, ಆರ್. ಎಂ. ನೇ ತುಂಬಾ ಇಷ್ಟ, ಎಂದಾಗ ಆರ್. ಎಂ. ಎಂದರೆ ರಾಯರ ಮಠಾ ಅಲ್ಲ, ರಾಗಿ ಮುದ್ದೆ ಎಂದು ಗೌಡ್ರರು ಹೇಳಿದಾಗ ನಗೆ ಬಾರದೆ ಇರಲಿಲ್ಲ.

ಮುದ್ದೆ ನಂಬಿ ನಾನು ಹೊರಬಿದ್ದೆ, ಎಲ್ಲೂ ಅದರ ಸದ್ದೆ ಇಲ್ಲ ನೋಡು ಎಂದಾಗ. ಲೇಖಕರು ತಮ್ಮ ಮನೆಗೆ ಅಹ್ವಾನಿಸಿ, ಅವರನ್ನು ತಮ್ಮ ಮನೆಯ ಜೋಳದ ರೊಟ್ಟಿ, ಪುಂಡಿ ಪಲ್ಲೆ ತಿನ್ನಲಿಕ್ಕೆ ಕರಕೊಂಡು ಬಂದಿದ್ದರು. ಆದರೆ ಆಗಲೇ ಸೆಕ್ಯುರಿಟಿ ಗಾರ್ಡಗಳು ಗನ್ ಮ್ಯಾನಗಳ ಸುತ್ತುವರೆದು, ವಿದೇಶಿ ಕಾರಿನಲ್ಲಿ ಕರೆದುಕೊಂಡು, ಹೋದರು. ಈ ರೀತಿ ಗೌಡರ ಹೋದ ಮೇಲೆ ಲೇಖಕರು 'ಕನಸಿನಿಂದ' ಗೌಡರ ಸಲುವಾಗಿ ಹಪಹಪಿಸುವ ಪರಿ ಹಾಸ್ಯಕ್ಕೆ ಗರಿ ಮೂಡಿಸಿದೆ.

ಈ ಪ್ರಬಂಧ ಬರಹ 'ಕರ್ಮವೀರ' ಪತ್ರಿಕೆಯಲ್ಲಿ ಜೂನ್ ೧೬, ೧೯೯೬ ರಲ್ಲಿ ಪ್ರಕಟಗೊಂಡಿದೆ.

**'ಜಾತ್ರೆ': ಕಂಡದ್ದು-ಕೊಂಡದ್ದು :** ಸಾಹಿತ್ಯ ಸಮ್ಮೇಳನಕ್ಕೆ ಲೇಖಕರು ಪರಿವಾರ ಸಮೇತ ಭೆಟ್ಟಿಯಿಟ್ಟಾಗ ಅಲ್ಲಿ ಪುಸ್ತಕ ಮಳಿಗೆಗಳ ಪ್ರಮಾಣ ಕಡಿಮೆ. ಇನ್ನಿತರ ಅಂಗಡಿ ಮುಗ್ಗಟ್ಟುಗಳು ಹೆಚ್ಚಿನ ಪ್ರಮಾಣದಲ್ಲಿದ್ದವು. ಅಂದರೆ ವ್ಯಂಗ್ಯ ರೀತಿಯಲ್ಲಿ ಲೇಖಕರು ಸಾಹಿತ್ಯ ಸಮ್ಮೇಳನ ನಡೆಯುವ ರೀತಿಯನ್ನು ವಿವರಿಸಿದ್ದಾರೆ. ಜನರು ಕೇವಲ ಊಟ, ಇನ್ನುಳಿದ ವಸ್ತು ಖರೀದಿಗಾಗಿ ಅಲ್ಲಿ ಬಂದಿರುತ್ತಾರೆ. ಹೊರತು ಅಲ್ಲಿಯ ಸಾಹಿತ್ಯ ಗೋಷ್ಠಿಗಳ ಗೋಜಿಗೆ ಅವರು ಕಿವಿಗೊಡುವುದಿಲ್ಲ. ಊಟ-ತಿನಿಸುಗಳ ನಡುವೆ ಜ್ಞಾನಕ್ಕೆ ಅಲ್ಲಿ ಸ್ವಲ್ಪ ಕಿಮ್ಮತ್ತು ಇಲ್ಲ. ಜನರು ಜಾತ್ರೆಯಲ್ಲಿ ತಿರುಗಾಡಿದಂತೆ ಸಾಹಿತ್ಯ ಸಮ್ಮೇಳನದಲ್ಲಿ

---

೮. 'ಉದರೋಪನಿಷತ್' – ಮಲ್ಲಿಕಾರ್ಜುನ ಹುಲಗಬಾಳಿ – ಪುಟ ೧೯

ತಿರುಗಿ ತಮ್ಮ ಮನೆಗೆ ಮರಳುವರು. 'ಜನಮರುಳೋ, ಜಾತ್ರೆ ಮರುಳೋ' ಎಂಬ ಗಾದೆಯಂತೆ ಜನರು ತಿರುಗುವರು ಹಾಗೆ ಪುಸ್ತಕ ಪ್ರೇಮಿಗಳು ಕಡಿಮೆ, ಸೀನೆಮಾ ಪ್ರೇಮಿಗಳು ನಮ್ಮಲ್ಲಿ ಹೇರಳ ಪ್ರಮಾಣದಲ್ಲಿದ್ದಾರೆ.

ಈ ನಗೆ ಬರಹ 'ಪ್ರಜಾವಾಣಿ' ಪತ್ರಿಕೆಯಲ್ಲಿ ಜೂನ್ ೧೫, ೧೯೯೫ರಲ್ಲಿ ಪ್ರಕಟಗೊಂಡಿದೆ.

**ಈ ಕತ್ತೆ (ಪ್ರ)ಸಂಗ** : ಹಗುರ ಬರಹ ಓದಿದಾಗ ನನಗೆ ರಾ. ಯ. ಧಾರವಾಡಕರ 'ಕತ್ತೆಗಳು' ಎಂಬ ಪ್ರಬಂಧದ ನೆನಪು ಬರುವುದು. ಕತ್ತೆ ಯಾವತ್ತಲೂ ಸ್ವತಂತ್ರ ಪ್ರಾಣಿ. ಅದು ತನ್ನ ಮನಸ್ಸಿಗೆ ಬಂದ ಹಾಗೆ ವರ್ತಿಸುತ್ತದೆ ಎಂದು ಧಾರವಾಡಕರ ಕತ್ತೆಯು ಹಾಳುಗೋಡೆ ಆಶ್ರಯ ಪಡೆದು. ಬೂದಿಯಲ್ಲಿ ಉಳ್ಳಾಡಿದರೆ ಅದರ ಪೂರ್ವಜನ್ಮ ನೆನಪು ಬರುತ್ತದೆ, ಎನ್ನುವ ಹಾಸ್ಯ ಪ್ರಸಂಗ ನಮ್ಮನ್ನು ವಿಚಾರ ಮಾಡಲಿಕ್ಕೆ ಹಚ್ಚುತ್ತದೆ.

ಈ ಪ್ರಬಂಧದಲ್ಲಿ ಪ್ರತಿಯೊಂದು ಸಂದರ್ಭದಲ್ಲಿ ಕತ್ತೆಯ ಪ್ರಸ್ತಾಪವನ್ನು ಹುಲಗಬಾಳಿಯವರು ಮಾಡಿದ್ದಾರೆ. ಕತ್ತಿ ಹಂಗ್ಯ ಮಾತಾಡ್ತಿಯಲ್ಲ, ಕತ್ತೆಗೆ ಹಾಳು ಗೋಡೆಯೇ ಆಸರ, ಕತ್ತಿ ಮುಖದಳ, ಕತ್ತಿ ದುಡಿದಾಂಗ ದುಡಿತೀನಿ, ಕತ್ತಿ ಚಾಕರೀ, ಇಂಥ ಎಲ್ಲ ಪದಗಳ ನಮ್ಮ ದಿನನಿತ್ಯ ಜೀವನದಲ್ಲಿ ಹಾಸು ಹೊಕ್ಕಾಗಿವೆ. ವಿಠ್ಠಲನ್ನು ಹಾಗೂ ಅವರಕ್ಕಳನ್ನು ಕೂಡ ಕತ್ತೆಗೆ ಹೋಲಿಸಿ ಲೇಖಕರು ನಗುವ ಪರಿ ವಿಶಿಷ್ಟವಾದುದು. ಈ ಲೇಖನ 'ಕನ್ನಡಮ್ಮ'ದಲ್ಲಿ ಸೆಪ್ಟೆಂಬರ್ ೧೮, ೧೯೯೪ ರಲ್ಲಿ ಪ್ರಕಟಗೊಂಡಿದೆ.

**ಅಷ್ಟ ನವಪಕ್ಷಗಳ ವೃತ್ತಾಂತವು** : ಇಂದಿನ ರಾಜಕೀಯಕ್ಕೆ ಅನುಗುಣವಾಗಿ ವಿವಿಧ ವಿಚಿತ್ರ ಪಕ್ಷಗಳ ಪರಿಚಯವನ್ನು ಲೇಖಕರು ಮಾಡಿಕೊಟ್ಟಿದ್ದಾರೆ.

* FAIL = 'ಫೇಲ್' – ಹದಿನಾಲ್ಕು ಭಾಷೆಯ ಪ್ರಾದೇಶಿಕ ಪಕ್ಷ.
* FAIR = 'ಫೇರ್' – ನಂತರ ಭಿನ್ನಮತಾಯರು ಹುಟ್ಟು ಹಾಕಿದ ಪಕ್ಷ.
* 'ಹವಿಜ' = ವೇದಿಕೆ – ಹಗರಣ ವಿಮುಕ್ತ ಜನತಾಂತ್ರಿಕ ವೇದಿಕೆ.

* **ಅಭಾವರಸಂ** : ಅಖಿಲ ಭಾರತ ವಸತಿ ಹೀನರ ರಕ್ಷಣಾ ಸಂಘ, ಹಲವಾರು ಹಗರಣಗಳಲ್ಲಿ ಸಿಕ್ಕುಕೊಂಡು ರಾಜಕೀಯದಲ್ಲಿ ಸೋಲನ್ನುಂಡ 'ಹುಲಿ' ರಕ್ಷಣೆಗಾಗಿ ಈ ಪಕ್ಷ ಇದು ಇಂದಿನ ರಾಜಕೀಯಕ್ಕೆ ಹಿಡಿದ ಕೈಗನ್ನಡಿಯಾಗಿದೆ.

* **ರೊಟ್ಟಿಪಕ್ಷ + ಚಿಟ್ಟಿಪಕ್ಷ** : ದರಿದ್ರನಿಗೆ ರೊಟ್ಟಿಕೊಡುವುದು. ಜೊತೆಗೆ ಚಿಟ್ಟಿ ಪಕ್ಷ ಸೇರಿಕೊಂಡಿದೆ. ಪಕ್ಷಾಂತರಿಗಳ ಪಕ್ಷ ಇದಾಗಿದೆ. ಅಂತೂ ಚಿಟ್ಟಿ ಜಾರಿ ರೊಟ್ಟಿಯಲ್ಲಿ ಬಿತ್ತು ಎಂದು ಕೆಲವರು ಹಾಸ್ಯ ಮಾಡುವರು.

* **ಮಮತಾದಳ** : ಮಣ್ಣಿನ ಮಕ್ಕಳ ತಾಪತ್ರಯ ದಳ. ಮಣ್ಣಿನ ಮಕ್ಕಳಾದ ಗ್ರಾಮೀಣರ ರಕ್ಷಣೆಗಾಗಿ ನಗರ ವಾಸಿಗಳು ಕಟ್ಟಿರುವ ಪಕ್ಷ ಇದಾಗಿದೆ. ಇದಕ್ಕೆ 'ಮನೆ ಮಕ್ಕಳನ್ನು ತಾರಕಕ್ಕೇರಿಸುವ ದಳ' ಎಂದು ಹಾಸ್ಯ ಮಾಡುವರು.

* **ಕಸರಸಂ :** ಕರ್ನಾಟಕ ಸಮ್ಯಕ್ ರಚನಾತ್ಮಕ ಸಂಘ. ಇಲ್ಲಿ ಸಮರಸದ ಕೊರತೆ ಎದ್ದು ಕಾಣುತ್ತದೆ.

* **ಡಿ.ಡಿ.ಟಿ. ಮೋರ್ಚಾ :** (ಡೈರಿ–ಡೌರಿ ಟೈಟ್ ಮೋರ್ಚಾ) ಇದು ಯಾವುದೇ ಕಾರ್ಯ ಕೈಕೊಳ್ಳುವಲ್ಲಿ ಸಫಲತೆ ಕಂಡಿಲ್ಲ.

ಈ ಎಲ್ಲ ಪಕ್ಷಗಳ ಬಗ್ಗೆ ಲೇಖಕರ ಅಭಿಪ್ರಾಯವಾದರೂ ಇವು ಕೇವಲ ಹೆಸರಿಗೆ ಮಾತ್ರ ಆದರೆ ಕಾರ್ಯಮಾತ್ರ ಶೂನ್ಯ. ಇಂದಿನ ರಾಜಕೀಯ ಪಕ್ಷಗಳು ಹಲವಾರು, ರಾಜಕೀಯ ಮುಖಂಡರು ಗೆದ್ದ ಎತ್ತಿನ ಬಾಲ ಹಿಡಿದು ಸಾಗುತ್ತಿದ್ದಾರೆ. ಈ ಹಗುರ ಬರಹ 'ಕನ್ನಡಪ್ರಭ' ಆಗಷ್ಟ ೨೮, ರಂದು ೧೯೯೬ ರಲ್ಲಿ ಪ್ರಕಟಗೊಂಡಿದೆ.

**ಪತಿ–ಸಿಂಪತಿ :** ಪ್ರಾಚೀನ ಕಾಲದಿಂದಲೂ ಸ್ತ್ರೀಶೋಷಣೆ ನಡೆದಿದೆ. ಆದರೆ ಆಧುನಿಕ ಕಾಲಕ್ಕೆ ಸ್ತ್ರೀ ಪುರುಷ ಶೋಷಣೆ ಪರಿಯನ್ನು ಇಲ್ಲಿ ಹಾಸ್ಯಭರಿತವಾಗಿ ಚಿತ್ರಿಸಲಾಗಿದೆ.

ಆಧುನಿಕ ಸತಿ, ಪತಿಪೀಡಕಳಾಗಿ ಬದಲಾಗಿದ್ದಾಳೆ. ಆದರೆ ಸಮಾಜದಲ್ಲಿ ನಿಯಮ, ಕಟ್ಟಳೆ, ಸಂಪ್ರದಾಯಗಳು ಅಷ್ಟು ಬೇಗ ಬದಲಾಗಲಾರವು. ಸ್ತ್ರೀ ಎಷ್ಟೋ ಶಿಕ್ಷಣ ಪಡೆದು ಗುಮಾಸ್ತನಿಂದ ಹಿಡಿದು ರಾಷ್ಟ್ರಪತಿವರೆಗೆ, ಮನೆಯ ಸಾಮಾನ್ಯ ಸ್ತ್ರೀಯಿಂದ ಹಿಡಿದು ರಾಜಕಾರಣಿಯವರೆಗೆ ಎಲ್ಲ ರಂಗಗಳಲ್ಲಿ ಕಾರ್ಯ ನಿರ್ವಹಿಸಿದರೂ, ಗಂಡಸಿನ ದೌರ್ಜನ್ಯ, ಶೋಷಣೆ ತಪ್ಪಿಲ್ಲ. ಈ ಹಗುರ ಬರಹ ಆಗಸ್ಟ್ ೩೦, ೧೯೯೫ ರಲ್ಲಿ ಪ್ರಕಟಗೊಂಡಿದೆ.

**ಎಲ್ಲೆಲ್ಲಿಯೂ ಸಲ್ಲುವರಯ್ಯಾ :** ಹೆಂಡತಿ ತವರ್ಮನೆ ಬಳಗ. ಯಾವ ರೀತಿ ಲೇಖಕರನ್ನು ದುಂದುವೆಚ್ಚಕ್ಕೆ ಗುರಿ ಮಾಡಿತು ಎಂಬುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಅಂದರೆ ಒಬ್ಬ ನೌಕರದಾರ ಹೆಂಡತಿಯಿಂದಾಗ ಯಾವ ರೀತಿ ಶೋಷಣೆ ಒಳಗಾಗುವನು ಎಂಬುದನ್ನು ಪ್ರಸ್ತಾಪಿಸಲಾಗಿದೆ. ಈ ಲೇಖನವನ್ನು 'ಕನ್ನಡಪ್ರಭ' ಜುಲೈ ೨೬, ೧೯೯೬ ರಲ್ಲಿ ಪ್ರಕಟಗೊಂಡಿದೆ.

**ಮೌಲ್ಯಮಾಪನ :** ಈ ಲೇಖನದಲ್ಲಿ ಲೇಖಕರು ಮೌಲ್ಯಮಾಪನದ ದೋಷಗಳನ್ನು, ಈಗಿನ ಶೈಕ್ಷಣಿಕ ಪದ್ಧತಿ ಅನುಗುಣವಾಗಿ ಹಾಸ್ಯ ರೀತಿಯಲ್ಲಿ ಚಿತ್ರಿಸಿದ್ದಾರೆ.

'ಮೌಲ್ಯ ಹುಡುಕುವದೆಂದರೆ, ನಮ್ಮ ಖಾನಾವಳಿಯ ಸಾರಿನಲ್ಲಿ ಬೇಳೆ–ಕಾಳು ಹೆಕ್ಕಿ ತೆಗೆದಷ್ಟೇ ಕಷ್ಟದ ಕೆಲಸ.

ಲಾಜಿಂಗನಲ್ಲಿ ಎಲ್ಲರೂ ಹ್ಯಾಗೋ ಸಹಕರಿಸಿ ೮–೧೦ ದಿನ ಇದ್ದು, ಮೌಲ್ಯಮಾಪನಕ್ಕೆ ಒಂದು ನೆಲೆ ಕಾಣಿಸುತ್ತಾರೆ. ಡಿಸಿಯೊಂದಿಗೆ ಸಹಾಯಕ ಮೌಲ್ಯಮಾಪಕರ ಕಷ್ಟ ಹೇಳತೀರದು. ಮೌಲ್ಯಮಾಪನದಲ್ಲಿ ಕೆಲವು ಹುಡುಗರು 'ಪಾಸು' ಮಾಡುವುದಕ್ಕಾಗಿ ಆಗ್ರಹ ಮಾಡಿಕೊಂಡಿರುತ್ತಾರೆ. ಕೆಲವರು ದುಡ್ಡಿನ ಆಮಿಷ ತೋರಿಸುವ ಮಹನೀಯರು ಇದ್ದಾರೆ. 'ಪಾಸು ಮಾಡಿ ಕನ್ಯಾದಾನ ಪುಣ್ಯ ಕಟ್ಟಿಕೊಳ್ಳಿ' ಎನ್ನುವ ಆಗ್ರಹಿಸುವ ಸ್ತ್ರೀ ರೂಪದಾರಿ ಗಂಡುಗಳಿಗೆ ಕೊರತೆ ಏನಿಲ್ಲ. ಇವು ಮೌಲ್ಯಮಾಪಕರ

ಬಿಗಿದ ಮುಖಗಳನ್ನು ಸಡಿಲಗೊಳಿಸುವ 'ರಿಲ್ಯಾಕ್ಸ್ ಐಟಂ'ಗಳಾಗಿವೆ.

'ಮನವಿಗೆ ಮಾವಿನ ಕಾಯಿ ಉದುರುವುದಿಲ್ಲವಲ್ಲ', ಅದಕ್ಕಾಗಿ ಮೌಲ್ಯಮಾಪನ ಕಾರ್ಯಕ್ಕೆ ತಡೆವುಂಟಾಗುತ್ತದೆ.

'ಶಂಖದಿಂದ ಬಂದದ್ದೆಲ್ಲ ತೀರ್ಥವೆ?' ಬೆಂಗಳೂರಿನಲ್ಲಿ ಖರೀದಿಸಿದ್ದು ಎಂದು ತಮ್ಮ ಊರಿನಲ್ಲಿ ಬಿಗುಮಾನದಿಂದ ಪ್ರದರ್ಶಿಸುತ್ತಾರೆ. ಮಡದಿ ಮಕ್ಕಳು ಉಬ್ಬಿಹೋಗುತ್ತಾರೆ.

**ಲೇಖಕರು ಕೊಡುವ ಮೌಲ್ಯಮಾಪನ ಪರಿಭಾಷಿಕ ಶಬ್ದಕೋಶಗಳು ಇಂತಿವೆ.**

* **ಮೈನರ್ ಆಪರೇಷನ್** : ಮೂವತ್ತು ಅಂಕಿನ ಸಮೀಪ ಬಂದ ಪರೀಕ್ಷಾರ್ಥಿಗಳನ್ನು ಪಾಸಿಸಲು ಅಗತ್ಯವಿರುವ ಒಂದು ನಿಯಮ.
* **ಮೇಜರ್ ಆಪರೇಷನ್** : ೨೬ ಅಂಕ ಪಡೆದವರನ್ನು ಮೂವತ್ತಕೇರಿಸಿ ಪಾಸು ಮಾಡುವುದು ಕಷ್ಟ.
* **ಪ್ಲಾಸ್ಟಿಕ್ ಸರ್ಜರಿ** : ಸಹಾಯಕ ಪರೀಕ್ಷೆಯಿಂದ ಮುಖ್ಯ ಪರೀಕ್ಷಕನು ಹಸಿರು ಮಸಿಯಿಂದ ಮಾಡುವ ತಿದ್ದುಪಡಿ.
* **So So** : ಮೂವತ್ತರಿಂದ ನಾಲ್ವತ್ತು ಅಂಕ ಪಡೆದವರು.
* **ಭೋನಸ್** : ಹೆಚ್ಚು-ಕಡಿಮೆ ಖಾಲಿಯಾಗಿರುವ ಉತ್ತರ ಪತ್ರಿಕೆಗಳು.
* **ಬಂಪರ್** : ಪೂರ್ತಿಯಾಗಿ ಖಾಲಿಯಾಗಿರುವ ಉತ್ತರ ಪತ್ರಿಕೆಗಳು.
* **ಎಪಿಕ್ (Epic)** : ಹೆಣಬಾರದ ಪುರವಣಿಗಳಿರುವ ಉತ್ತರಪತ್ರಿಕೆಗಳು.
* **ಪನಿಷ್ಡ್ (Punished)** : ಮೌಲ್ಯಮಾಪನ ಕಾರ್ಯ ಮುಗಿದ ರೀತಿ, ಕೊನೆಗೆ ಚೆಕ್‌ವಿತರಣೆ.

ಉತ್ತರ ಕರ್ನಾಟಕದವರ ಅರ್ಧ ಹೆಸರುಗಳು ಅಪಭ್ರಂಶಗೊಂಡು ನಗೆಯ ಅಲೆಗಳೇಳುತ್ತವೆ. ಕಟ್ಟಿ-ಕತ್ತಿಯಾಗಿ, ತಟ್ಟಿ-ತತ್ತಿಯಾಗಿ, ಕಾಡದೇವರ-ಕಡದ ದೇವರಾಗಿ, ಹುಲಗಬಾಳಿಯಾಗಿ, ಒಟ್ಟಿನಲ್ಲಿ ಚಕ್ ಓದುವರಿಗೆ 'ಅರ್ಧ ಹೆಸರುಗಳು ಕಬ್ಬಿಣದ ಕಡಲೆಗಳಾಗಿ' ಪರಿಣಮಿಸುತ್ತವೆ.

ಕೇವಲ ಮೌಲ್ಯಮಾಪನ ಕಾರ್ಯ ಅಷ್ಟೇ ಅಲ್ಲ, ರಾಜಕಾರಣವೂ ಅಲ್ಲಿದೆ. ಈ ನಗೆ ಬರಹ 'ಸುಧಾ' ಪತ್ರಿಕೆಯಲ್ಲಿ ಮೇ ೧೯, ೧೯೯೧ ರಲ್ಲಿ ಪ್ರಕಟಗೊಂಡಿದೆ.

ಗಡ್ಡ ಬಿಡಿ ಗಡ್ಡ : ಎನ್ಕೆಯವರ 'ಗಡ್ಡಧಾರಿಗಳು' ಎಂಬ ನಗೆ ಬರಹವನ್ನು ಇದು ಹೋಲುತ್ತದೆ. ಅಂದರೆ ಅಲ್ಲಿ ವಿವಿಧ ತೆರನಾದ ಗಡ್ಡ ಬಿಡುವ, ಗಡ್ಡರೂಪಿಗಳ ಬಗ್ಗೆ ಹಾಸ್ಯಮಯವಾಗಿ ಚಿತ್ರಿಸಿದ್ದಾರೆ. ಆದರೆ ಇಲ್ಲಿ ಗಡ್ಡ ಬಿಟ್ಟಿದ್ದರಿಂದ 'ಮಂದಾಕಿನಿ' ಈತನಿಗೆ ಕೈಕೊಟ್ಟ ಪ್ರಸಂಗ, 'ಮುಳ್ಳಹಂದಿಯಂಗ ಕಾಣಸ್ತೀರ್‍ಯಪ್ಪಾ' ಎಂದು ಅಪಹಾಸ್ಯ ಮಾಡುವಳು.

ಗಡ್ಡಧಾರಿಯಾದ್ದರಿಂದ ಈತನ್ನನು 'ಬಿಕ್ಷುಕ' ಎಂದು ತಿಳಿದು ಚಿಲ್ಲರೆ ನಾಣ್ಯಹಾಕಿದ ಪ್ರಸಂಗ ನಗೆ ತರಿಸುವಾಂತದ್ದು. ಅಂದರೆ ಆಯಾ ವ್ಯಕ್ತಿಗಳು ತಮ್ಮ-ವೃತ್ತಿ, ಅಧಿಕಾರಕ್ಕೆ ಅನುಗುಣವಾಗಿ

ವೇಷ–ಭೂಷಣ, ಅಲಂಕಾರ ಮಾಡಿಕೊಂಡುರುವುದು ಸೂಕ್ತವಾಗಿದೆ. ವಿಚಿತ್ರ ವೇಷಭೂಷಣ ವ್ಯಕ್ತಿಗಳನ್ನು ನಗೆಪಾಟಲಿಗೆ ಈಡು ಮಾಡುತ್ತದೆ. ಈ ಬರಹ 'ಕರ್ಮವೀರ' ಪತ್ರಿಕೆಯಲ್ಲಿ ಸೆಪ್ಟೆಂಬರ್ ೩, ೧೯೯೫ ರಲ್ಲಿ ಪ್ರಕಟಗೊಂಡಿದೆ.

**ರೂಢಾರೂಢರು** : ಕೆಲವೊಬ್ಬರು ರೂಢಿಯಿಂದ ಪದಗಳನ್ನು ಓತಪ್ರೋತವಾಗಿ ಬಳಕೆ ಮಾಡುವ ರೀತಿ ವಿಶಿಷ್ಟತೆಯಿಂದ ಕೂಡಿರುತ್ತದೆ. ಜೊತೆಗೆ ಅವರಿಗೆ ಗೊತ್ತಿಲ್ಲದಂತೆ ಆ ಪದ ಬಳಕೆ ಆಗುತ್ತಿರುತ್ತದೆ.

ಲೇಖಕರ 'ಸಾಲಾ' ಪತ್ರದ ಒಕ್ಕಣಿಕೆ ಈ ರೀತಿ ಪ್ರಸ್ತಾಪಿಸುತ್ತಾ, ಪ್ರಿಯಾ ಮನವರಿಗೆ, ಈಗ ನಾನೂ ಪಸು ಆಗಿರುವೆ ಮತ್ತು ನಾನು ಪಸು ಆಗಲು ನೀವು ಭಾಳ ಕಸೇಸಿ ಮಾಡೇರಿ... ನಿಮ್ಮಗ ನಮ್ಮ ಕ್ಷಾರಗೋಳು'.... ಈ ರೀತಿ ಹಾಸ್ಯದಿಂದ ತಪ್ಪಿನಿಂದ (ಅಕ್ಷರದೋಷದಿಂದ) ಕೂಡಿತ್ತು.

'ಕಂಡಕ್ಟರ್ ಪ್ರಸಂಗ' ಬಗ್ಗೆ ಲೇಖಕರು ಪ್ರಸ್ತಾಪಿಸಿದ್ದಾರೆ. ಕವಿ ಮಿತ್ರನೊಬ್ಬ ಭಯಂಕರ ಪದದ ಬಳಕೆ. ಉದಾ : 'ನನಗ ಭಯಂಕರ ಹಸಿವು ಆಗೇತಿ' ಇತ್ಯಾದಿ. ಅವರನ್ನು ನಾವು 'ಭಯಂಕರ ಕವಿ' ಎಂದು ಕರೆಯುತ್ತೇವೆ.
ಉದಾ : 'ವೇಟ್ ಲಿಫ್ಟಿಂಗ್ ಚಾಂಪಿಯನ್ ವ್ಯಕ್ತಿ ಖಾಲಿ ಕೊಡಾ ಎತ್ತಾಕ ಹೋಗಿ, ಸೊಂಟಾ ಉಳಕಿಸಿಕೊಂಡಿದ್ದನಂತ'.

ಗಣಿತ ಪ್ರಾಧ್ಯಾಪಕರು ಮಹಿಳಾ ಸಮಾಜದ ಕಾರ್ಯಕ್ರಮದ ಮುಖ್ಯ ಅತಿಥಿಯಾಗಿ ಹೋಗಿದ್ದರು. ಈ ಪ್ರಾಧ್ಯಾಪಕರ ಪತ್ನಿ ಆ ಮಹಿಳಾ ಸಮಾಜದ ಸೆಕ್ರೆಟರಿ.

'ನನ್ನ ಪ್ರೀತಿಯ ಸಹೋದರಿಯರೆ' ಭಾಷಣ ಪ್ರಾರಂಭಿಸಿ ಆದರೆ ತಮ್ಮ ಪತ್ನಿ ನೆನಪಾಗಿ ತಮ್ಮ ಗಣಿತ ಲೆಕ್ಕಾಚಾರದಿಂದ 'ನನ್ನ ಪ್ರೀತಿಯ ಸಹೋದರಿಯರಲ್ಲಿ ಮೈನಸ್ ಒನ್...' ಅಂತಾ ಈ ರೀತಿಯಾಗಿ ಪ್ರಾಧ್ಯಾಪಕರು ಭಚಾವ ಆದರು.

ವಿದ್ಯಾರ್ಥಿಗಳು ತಮ್ಮ ಕ್ಲಾಸ ಟೀಚರ್ ಇದ್ದರೆ 'ಯೇಸ್ ಮ್ಯಾಡಂ' ಎಂದು ರೂಢಿ ಇರುತ್ತದೆ. ನಂತರ ಸರ್ ಅದೇ ಕ್ಲಾಸಿಗೆ ಬಂದಾಗ ವಿದ್ಯಾರ್ಥಿಗಳು ರೂಢಿಯಿಂದ ಪುರುಷ ಎನ್ನುವ ಪರಿಜ್ಞಾನವಿಲ್ಲದೇ 'ಯೇಸ್ ಮ್ಯಾಡಂ' ಎಂದು, ತಕ್ಷಣ 'ಸಾರಿ ಸರ್' ಅಂತಾರೆ. ಈ ರೂಢಿ ಬಲದ ಮಹಿಮೆಯೇ ಇಂಥದ್ದು. ಈ ರೀತಿ ರೂಢಿಯಿಂದ ಹಾಸ್ಯ ಪ್ರಸಂಗಗಳು ನಮ್ಮ ಜೀವನದಲ್ಲಿ ಬಂದು ಹೋಗುತ್ತವೆ. ಈ ನಗೆ ಬರಹ ಓದಿ ನಾವು ನಮ್ಮ ತಪ್ಪನ್ನು ತಿದ್ದಿಕೊಳ್ಳಲಿಕ್ಕೆ ಪ್ರಯತ್ನಪಡೋಣ. ಇದು 'ಆಕಾಶವಾಣಿ' ಧಾರವಾಡ ಕೇಂದ್ರದಿಂದ ಮಾರ್ಚ ೧೮, ೧೯೯೬ ರಲ್ಲಿ ಪ್ರಕಟಗೊಂಡಿತು.

**ಹೆಂಡತಿಯನ್ನು ಕರೆಯುವ ಪರಿ** : ಸದಾಕಾಲವೂ ಸತಾಯಿಸುವವಳಿಗೆ 'ಸತಿ' ಎಂಬ ಹೆಸರು ಬಂದಿರಬೇಕು. 'ಹೆಂಡತೀ ನೀ ಯಾಕ ನನ್ನ ಪ್ರಾಣ ಹಿಂಡುತೀ....' ಜೋರಾಗಿ ಅಂದದ್ದು ಗಿರಿಜಾಗೆ ಸಿಟ್ಟು ಬಂದು ಕೆಂಡವಾಗಿದ್ದಳು.

ವಿಶ್ವೂನ ಆಗಮನ. ನನ್ನ ಹೆಂಡತಿ ಹೆಸರು ಅಕ್ಕಮ್ಮಾ ಅಂಥ ಇದೆ. ನಾನು ಯಾವ ಹೆಸರು ಹಿಡಿದು ಆಕೆಯನ್ನು ಕರೆಯಲಿ ಎಂದು ಲೇಖಕರನ್ನು ಕೇಳಿದಾಗ, ಅವರು ವಿಚಾರ ಮಗ್ನರಾಗಿ ಕುಳಿತಾಗ ಕೊನೆಗೆ ಲೇಖಕರ ಹೆಂಡತಿ ಅಕ್ಕಮ್ಮ ಹೆಸರನ್ನು ಬದಲಾಯಿಸದೇ 'ಕಮ್, ಕಮ್' ಎಂದು ಕರೆ ಎಂದು ಹೇಳಿ ಮಾತಿಗೆ ಪೂರ್ಣವಿರಾಮ ನೀಡುವಳು.

ಈ ಹಾಸ್ಯ ಬರಹ 'ಕರ್ಮವೀರ' ದೀಪಾವಳಿ ವಿಶೇಷಾಂಕ ೧೯೯೫. ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ವಿನೋದ ಸಾಹಿತ್ಯ-೯೫' ರಲ್ಲಿ ಸಂಕಲಣಗೊಂಡಿದೆ.

**ಹಳವಂಡಗಳು :**

'ಉದರೋಪನಿಷತ್' ಹಾಸ್ಯ ಸಂಕಲನದ ಕೊನೆಯ ಹಗುರ ಬರಹವಾಗಿದ್ದು, ಸೆಪ್ಟೆಂಬರ್ ೧, ೧೯೯೬ ರಂದು ಇದು ಪ್ರಕಟಗೊಂಡಿದೆ. ಹಳವಂಡಗಳು ಎಂದರೆ ಆಸೆ ನಿರಾಸೆ ಆಗುವ ಪರಿ. ನಮ್ಮ ಆಸೆಗಳು ನೇರವೇರದಿದ್ದರೆ ನಾವು ಹಳಹಳಿಸುತ್ತೇವೆ. ಕನಸಿನಲ್ಲಿ ಇಡೇರಿದಂತೆ ಅನಿಸುತ್ತವೆ.

**ಗುಡ್ ಬೈ ಬಿಜಾಪೂರ :**

ಹಗುರ ಬರಹಗಳು ೧೯೯೪ ರಲ್ಲಿ ನಂದ ಪ್ರಕಾಶನ, ಬನಹಟ್ಟಿಯಲ್ಲಿ ಪ್ರಕಾಶನಗೊಂಡಿದ್ದು. ಹದಿನಾಲ್ಕು (೧೪) ಹಾಸ್ಯ ಲೇಖನ (ಪ್ರಬಂಧ)ಗಳಿಂದ ಓದುಗರನ್ನು ಆಕರ್ಷಿಸುತ್ತದೆ. ಈ ಕೃತಿ ಗೊರೂರು ಸಾಹಿತ್ಯ ಸ್ಪರ್ಧೆಯಲ್ಲಿ ಮೆಚ್ಚುಗೆ ಪಡೆದಿದೆ.

ಡಾ॥ ಗುರುದೇವಿ ಹುಲೆಪ್ಪನವರಮಠ ತಮ್ಮ ಮುನ್ನುಡಿಯಲ್ಲಿ 'Our Sweetest songs are those that tell of saddest thoughts' ಅಂದರೆ ಬಿಜಾಪೂರ ಜಿಲ್ಲೆಯೊಂದಿಗೆ ಅವರ ಒಡನಾಟ, ಆತ್ಮೀಯತೆ ೧೯೯೭ ವರೆಗೆ ಇತ್ತು. ಕೊನೆಗೆ ಬಾಗಲಕೋಟೆ ಜಿಲ್ಲೆಯಲ್ಲಿ ಜಮಖಂಡಿ ತಾಲೂಕು ಸೇರ್ಪಡೆಯಾದದ್ದರಿಂದ ಅವರಿಗೆ 'ತಮಗೆ ಅತಿ ಆತ್ಮೀಯರಾದ ವ್ಯಕ್ತಿ ಒಬ್ಬರನ್ನು ಕಳಕೊಂಡಷ್ಟು ದುಃಖ, ನೋವು, ದುಗುಡ, ತಳಮಳ ಉಂಟಾಯಿತು'.

'ಬಿಂದುವಿನಲ್ಲಿ ಸಿಂಧುವನ್ನು ದರ್ಶನಮಾಡಿಸುವ ಶೈಲಿ ಇವರದು' ಎಂದು ಗುರುದೇವಿ ಹುಲೆಪ್ಪನವರಮಠ ಹಾಸ್ಯ ಲೇಖಕ ಮಲ್ಲಿಕಾರ್ಜುನ ಹುಲಗಬಾಳಿಯವರ ಬಗ್ಗೆ ತಮ್ಮ ಅನಿಸಿಕೆ ವ್ಯಕ್ತಪಡಿಸುವರು'. (ಬೆನ್ನುಡಿಯಲ್ಲಿ)

ಮುಂಜಾನೆ ಸತ್ಯ ಅವರ ಅಭಿಪ್ರಾಯದಂತೆ – 'ಬಡವಾಗುತ್ತಿರುವ ವಿನೋದ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಬಲ್ಲ ಧೀಮಂತ ಪ್ರತಿಭಾವಂತರಲ್ಲಿ ಶ್ರೀ ಹುಲಗಬಾಳಿ ಅವರೂ ಒಬ್ಬರು. ಇದು ನಮಗೆಲ್ಲ ಅಭಿಮಾನ, ಸಂತಸ ತರುವಂಥದ್ದು.

ಈ ಪ್ರಬಂಧ ಸಂಕಲನಗಳಲ್ಲಿ ನಾನು ಮೆಚ್ಚಿಕೊಂಡದ್ದು–ಪ್ರಬಂಧಗಳು ಗುಡ್ ಬೈ ಬಿಜಾಪುರ, ಸೀರೆಗೊಂದು ಸೀರೆ, ಟೈಪಿಂಗ್ ಮೈ ಡಾರ್ಲಿಂಗ್, ನಿಮಿಷಕ್ಕೊಂದು ಮಿನಿಟ್, ಸ್ವೂನೀಜಂ ಇತ್ಯಾಧಿ.

ಗುಡ್ ಬೈ ಬಿಜಾಪುರ : ಈ ಪ್ರಬಂಧದಲ್ಲಿ 'ಮಾನಸಿಕವಾಗಿ ಜನರು ಬಿಜಾಪುರ ಜಿಲ್ಲೆ ಜೊತೆಗೆ ಹೊಂದಿಕೊಂಡಿರುವುದು ವ್ಯಕ್ತವಾಗಿದೆ'. 'ನಿನ್ನ ಬಿಟ್ಟ ಹೊಂಟಾಗಿನ ನನ್ನೀ ಒಳಗೊರತ ಇಲ್ಲಿ ಹ್ಯಾಂಗ್ ಹೇಳ್ಲಿ?'[೯]

ಬಿಜಾಪುರದ ವೈಶಿಷ್ಟ್ಯತೆ, ವಾಸ್ತವ ಸ್ಥಿತಿ ಬಗ್ಗೆ, ಸ್ಥಳ ಅಭಿಮಾನ ಇಲ್ಲಿ ವ್ಯಕ್ತವಾಗಿದೆ. ಪಂಚನದಿಗಳ ನಾಡು ಪಂಜಾಬ ಎಂದು ಬಿಜಾಪುರ ಜಿಲ್ಲೆಯನ್ನು ಕರೆದಿದ್ದಾರೆ.

'ಡಬ್ಲೂ ಹಾರ್ಟ' ಎನ್ನುವನು 'ಜ್ವಾಳದ ನುಚ್ಚಿನಂಗ ಇಟೇ ಮುದ್ದಿ ಯಂಗ ಇದ್ದ ನಿನ್ನನ್ನ ಇಷ್ಟು ಅಗಲ ಮಾಡಿದನಂತ' ಎಂದು ಲೇಖಕರು ಅದರ ಐತಿಹಾಸಿಕ ಮಹತ್ವತೆ ಬಗ್ಗೆ ತಿಳಿಸಿದ್ದಾರೆ.

ಆಹಾರದ ವಿಶೇಷತೆ ಎಂದರೆ ಜೋಳದ ರೊಟ್ಟಿ, ಸೆಂಗಾ ಚಟ್ನಿ, ಮುಂಡೀ ಪಲ್ಲೆ ರುಚಿ ಜಾಸ್ತಿ. 'ಬಿಜಾಪುರದಾವು ಎದ್ದರ ಐರಾವತಾ, ಮಲಗಿದರ ಕುಂಭಕರ್ಣಾ', 'ಸ್ವತಂಕ ಇಲ್ಲ ಮಾಡಿಕೊಂಡು, ಇನ್ನೊಬ್ಬರಿಗೆ ತೂರಿ ಬಿಡುವಂಥಾ ಉದಾರಿಗಳು!' ಅವರ ಗುಣ ಸ್ವಭಾವಗಳ ಚಿತ್ರಣ ಇಲ್ಲಿ ಕಂಡು ಬರುತ್ತದೆ.

---

೯. 'ಗುಡ್ ಬೈ ಬಿಜಾಪುರ' – ಮಲ್ಲಿಕಾರ್ಜುನ ಹುಲಗಬಾಳಿ – ಪು.ಸಂ. – ೧

'ಡೋಣಿ (ನದಿ) ಹರದರ ಓಣಿ ಎಲ್ಲಾ ಜ್ವಾಳಾ' ಎಂಬ ಸಮೃದ್ಧತೆ, ಸಂಕೇತ. ಮಹಾನ್ ನಾಯಕರಾದ ಇಂದಿರಾ ಗಾಂಧಿ, ಹಾಗೂ ನಿಜಲಿಂಗಪ್ಪರನ್ನು ರಾಜಕೀಯ ರಂಗದಲ್ಲಿ ಮೇಲ್ಮಟ್ಟಕ್ಕೆ ತರಲು (ಉತ್ತುಂಗಕ್ಕೇರಿಸಲು) ಇಲ್ಲಿಯ ಜನಗಳೇ ಕಾರಣ. ಬಂಗಾರವನ್ನು ತುಲಾಭಾರ ಮಾಡಿ ರಾಷ್ಟ್ರಕ್ಕೆ ಅರ್ಪಿಸಿದ ಮಹಾನುಭಾವರು ಈ ಇಬ್ಬರೂ ರಾಷ್ಟ್ರೀಯ ಧುರೀಣರು.

ಕವಿಗಳಿಗೆ, ಮಕ್ಕಳ ಸಾಹಿತಿಗಳಿಗೆ, ಹಾಸ್ಯಸಾಹಿತಿಗಳಿಗೆ ಭರವಿಲ್ಲ. ಸಾಹಿತ್ಯಿಕವಾಗಿ, ರಾಜಕೀಯವಾಗಿ, ಐತಿಹಾಸಿಕವಾಗಿ ಇದು ವಿಶೇಷತೆಯಿಂದ ಕೂಡಿದೆ. ಆದರೆ ಇದಕ್ಕೆ ಬಿಸಲಾಪುರ, ಧೂಳಾಪುರ, ನಂತರ ಬರದಪುರ ಎಂದು ಬಿರುದು ಕೊಟ್ಟಿದ್ದಾರೆ. ಬಿಜಾಪುರದ ಜೊತೆಗೆ ಲೇಖಕರಿಗೆ ಅಪ್ಯಾಯಮಾನವಾದ ಪ್ರೀತಿಯಿದೆ.

'ಸೀರೆಗೊಂದು ಸೀರೆ' : ದೀಪಾವಳಿ, ಗಣೇಶಚತುರ್ಥಿ, ಯುಗಾದಿ ಹಬ್ಬಗಳಿಗೆ ಎಲ್ಲ ಬಟ್ಟೆ ಅಂಗಡಿಗಳಲ್ಲಿ ರಿಯಾಯಿತಿ ದರದಲ್ಲಿ ಬಟ್ಟೆ ದೊರೆಯುತ್ತದೆ, ಎಂಬ ಜಾಹೀರಾತಿಗೆ ಮರುಳಾಗಿ ಎಲ್ಲರು ಅತ್ತ ಧಾವಿಸುವರು. ಲೇಖಕರು, ಪತ್ನಿ ಕೂಡ ಅದೇ ರೀತಿ ಒಂದು ಸೀರೆ ಕೊಂಡುಕೊಂಡರೆ ಇನ್ನೊಂದು ಪುಕ್ಕಟೆಯಾಗಿ ದೊರೆಯುತ್ತದೆ ಎಂಬ ಜಾಹೀರಾತಿಗೆ ಮರುಳಾಗಿ. ಸೀರೆಕೊಂಡು ಎರಡು ಸಲ ನೀರಿಗೆ ಹಾಕಿದಾಗ (ಒಗೆದಾಗ) ಅದು ತನ್ನ ಮೂಲ ಸ್ವರೂಪ ಬದಲಾಯಿಸಿಕೊಂಡು ಬಿಡುತ್ತದೆ. ಅಂದರೆ ಬಟ್ಟೆ ಬೆಲೆ ಕಡಿಮೆಯಿದ್ದರೆ, ಅದರ ಜೊತೆಗೆ ಅದರ ಗುಣಮಟ್ಟವೂ ಕಡಿಮೆ ಇರುವುದು.

ಪಠ್ಯಪುಸ್ತಕ ಕೊಂಡಾವ್ರಿಗೆ ಗೈಡ್, ಶರ್ಟ ಕೊಂಡಾವ್ರಿಗೆ ಬನಿಯನ್ನು, ಟೂತ್ ಪೇಸ್ಟ್ ಕೊಂಡಾವ್ರಿಗೆ ಹಲ್ಲುಜ್ಜುವ ಬ್ರಶ್, ಸ್ಕೂಡ್ರೈವರ್ ಕೊಂಡರೆ ಕಾರು, (ಸಾಧ್ಯವಿಲ್ಲ) ಸರಪಳಿಕೊಂಡರೆ ಆನೆ ಉಚಿತ ಇಂಥ ಪುಕ್ಕಟೆ ಉದಾಹರಣೆ ಕೊಡಬಹುದು.

ಪರಂಥೂ ಈ 'ಉಚಿತ' ಅನ್ನೋದೇ ಎಷ್ಟೊಂದು ಅನುಚಿತ ಅದ ನೋಡ್ರಿ. 'ಈ ಸಿನೇಮಾ ನೋಡಿದ ಪ್ರೇಕ್ಷಕರಿಗೆ ತಲಾ ಎರಡೆರಡು ಅನಾಸಿನ ಗುಳಿಗೆ ಫ್ರೀ...' ಅನ್ನುವ ಸ್ಲೋಗನ್ನು ತುಂಬಾ ಉಚಿತವೆನಿಸಿತು.

ವ್ಯಾಪಾರಿಗಳ ಗುಟ್ಟು, ಒಂದರ ಜೊತೆ ಒಂದು ಉಚಿತ, ಮೋಸ ಕೂಡ ಸೇರಿರುತ್ತದೆ. ನೋಡಲು ಎರಡು ವಸ್ತು ಒಂದೇ ಎಂದು ಕಂಡರೂ, ಅವುಗಳ ಗುಣಮಟ್ಟ ಬೇರೆ ಬೇರೆ ಎಂಥವರೂ ಕೂಡ ಜೀವನದಲ್ಲಿ ಇಂಥವುಗಳಿಗೆ ಮೋಸ ಹೋಗುವುದು ಸಹಜ.

'ಕಾರ್ಡಂ ವಂದೇ ಜಗದೋದ್ಧಾರಕಂ' : ಕಾರ್ಡು ನಮ್ಮ ದೇಶದಲ್ಲಿಯೇ ಅತಿ ಕಡಿಮೆ ಬೆಲೆ ಸಿಗುವಂತದ್ದು ಜೊತೆ ಬಹುಉಪಯೋಗಿ. ಕಾರ್ಡಿನಲ್ಲಿಯೇ ಅಕ್ಷರಗಳನ್ನು ಬರೆದು ಗಿನ್ನಿಸ್ ದಾಖಲೆ ಮಾಡಿರುವವರು ನಮಗೆ ಸಾಕಷ್ಟು ಜನರು ಸಿಗುತ್ತಾರೆ. ಆದರೆ ಅವರಲ್ಲಿ ಒಬ್ಬರನ್ನು ಗಿನ್ನಿಸ್ ದಾಖಲೆಗೆ ಆಯ್ಕೆ ಮಾಡುವರು.

ಮೇಲಂತಸ್ತಿನ ಹಮ್ಮು-ಬಿಮ್ಮು ದೂರವೇ ಇಟ್ಟು, ನಾನಂತೂ ಅಂಚೆ ಕಾರ್ಡನ್ನೇ ಆಧರಿಸಿರುವೆ, ಆದರಿಸುವೆ ಕೂಡ. ಕಪ್ಪರು ಕಾರ್ಡಗಳೆಂಬ 'ಗಂಡ್ ಏಳ್ಡಾ'ದರೆ, ಅಂತರ್‌ದೇಶಿ ಎಂಬ 'ಒಂದೇ

ಯೆಣ್ಣು'! ಹಿರಿಯಣ್ಣ 'ಕವರು' ಯಾವಾಗ್ಲೂ ಹುಬ್ಬುಗಂಟಿಕ್ಕಿಸಿ, ಬಿಕ್ಕೊಂಡೇ ಇರೋನು. ಇವನೊಬ್ಬ ಗುಮನಗುಸುಗ. ಹಾಗೆಲ್ಲ ಈ ಕವ್ಹರಣ್ಣನನ್ನೂ ಸುಲಭವಾಗಿ ಡಿಸ್‌ಕವ್ಹರ್ ಮಾಡ್ಲಿಕ್ಕಾಗದು. 'ಇವ ಬಾಲ ಕತ್ತರಿಸುವ ವರೆಗೂ ಬಾಯಿ ಬಿಡುವವನಲ್ಲ'. ಕವಿಗಳೊಬ್ಬರು ಹೇಳುವಂತೆ – 'ಕವ್ಹರಣ್ಣ ಎಂದರೆ ಕಣ್ಣುರಿ' ಎಂಬ ಮಾತು ಅಷ್ಟೇ ಖಚಿತ, ಉಚಿತ.

ಇನ್ನು ಅಂತರದೇಶಿಯೋ...? ಆಹಾ!, ಅತ್ತೂ ಅಲ್ಲದ ಇತ್ತೂ ಇಲ್ಲದ, ಇದೊಂದು ಅಂತರ್ ಪಿಶಾಚಿನಿ! ಹಿರಿಯಣ್ಣ ಹಾಗೆ (ಕವರ) ಪೂರ್ತಿ ಗುಮ್ಮಾಳೂ ಅಲ್ಲ, 'ಕಿರಿಯ ತಮ್ಮ ಕಾರ್ಡಿನ ಹಾಗೆ, ತೆರೆದ ಹೃದಯಿಯೂ ಅಲ್ಲ. ಪರದೇಶಿ ಬಿಕನಿ ಧರಿಸಿರುವ ಈ ಅಂಗನೆಯನ್ನು ನಂಬುವದಂದ್ರೆ, ನಮ್ಮ ಸರ್ಕಾರಿ ಅಂಕಿ–ಸಂಖ್ಯೆಗಳನ್ನು ನಂಬಿದಂತೆಯೇ ಸರಿ.

ಕಾಡು ಜೊತೆ ಮರುತ್ತರ ಕಾರ್ಡ ಇಟ್ಟು ಪತ್ರ ಬರೆದರೆ 'ಅದು ಬಂದರೆ ಕುದುರೆ ಜುಟ್ಟು, ಬಾರದಿದ್ದರೆ ಕತ್ತೆಬಾಲ' ಕೋಟಿಯಷ್ಟು ಅಲ್ಲದಿದ್ದರೂ ಕೋಟಿ ಸಿಕ್ಕಷ್ಟು ಖುಷಿ ನೀಡುವಂಥದ್ದು.

ಕಾರ್ಡಿನ ಮಹತ್ವ, ಉಪಯುಕ್ತತೆ ಸಾಕಷ್ಟಿದೆ. ಕಾರ್ಡಿನ ಬಗ್ಗೆ ಅವಿನಾಭಾವ ಸಂಬಂಧ ಹೊಂದಿದ್ದರಿಂದ, ಲೇಖಕರ ಸ್ನೇಹಿತರು ಇವರನ್ನು 'ಕಾರ್ಡೇಶಿ' ಎಂದು ಕರೆಯುತ್ತಾರೆ.

ಲೇಖಕರು ಕಾರ್ಡಿನ ಬಳಕೆ, ಮಹತ್ವ, ವೆಚ್ಚ, ಉಪಯುಕ್ತತೆ ಬಗ್ಗೆ ಹೇಳುತ್ತಾ ಕಾರ್ಡಿನ ಮೇಲೆ ಅತಿಪ್ರೀತಿ ಹೊಂದಿದ 'ಕಾರ್ಡೇಶಿ' ಎಂಬ ಅನ್ವರ್ಥಕನಾಮವುಂಟು. ಈ ಶೀರ್ಷಿಕೆ ಈ ಪ್ರಬಂಧಕ್ಕೆ ಸೂಕ್ತವಾಗಿದೆ. ಉದಯವಾಣಿ–ದೀಪಾವಳಿ ವಿಶೇಷಾಂಕ ೧೯೯೮ ರಲ್ಲಿ ಪ್ರಕಟಗೊಂಡಿದೆ.

'ಮನೆ ಹುಡುಕಿ ನೋಡು' : 'ದಡ್ಡರು ಮನೆ ಕಟ್ಟಸ್ತಾರ, ಜಾಣರು ಅದರೊಳಗೆ ವಾಸ ಮಾಡ್ತಾರ' ಇಂಗ್ಲೀಷ ಗಾದೆ ಮಾತು. ಒಳ್ಳೆಯ ಮನೆ, ಒಳ್ಳೆಯ ಮನೆಯಜಮಾನ ಸಿಗಬೇಕಾದರೆ ಪುಣ್ಯ ಮಾಡಿರಬೇಕು. ಒಳ್ಳೆಯ ಮನೆ ಸಿಗಬೇಕಾದ್ರ ಕನ್ಯಾಪರೀಕ್ಷಾ ಮಾಡಿದಂಗ.

ಬಾಡಿಗೆ ಮನೆ ಹುಡುಕುವ ಪರಿ, ಲೇಖಕರ ಪರದಾಟ, ಸಿಕ್ಕರೆ ಯಾಜಮಾನರ ಕಾಟ, ಯಜಮಾನನ ಗುಣಸ್ವಭಾವ ತಿಳಿದು ಅರಿತು ಮುಂದಿನ ಕಾರ್ಯಕ್ಕೆ ಪ್ರವೃತ್ತನಾಗುವುದು ಇವರ ಪ್ರವೃತ್ತಿ. ಒಟ್ಟಿನಲ್ಲಿ 'ಹಿಂದಿನ ಜನ್ಮದ ಪುಣ್ಯದ ಫಲದಿಂದ ಒಳ್ಳೆಯ ಮನೆ ಬಾಡಿಗೆಗೆ ಸಿಗಬಹುದು' ಎನ್ನುವ ಮಾತು ನಿತ್ಯಸತ್ಯ.

'ಟೈಪಿಂಗ್ ವ್ಹೈ ಡಾರ್ಲಿಂಗ್' : 'ಯಂತ್ರದ ಯಾಂತ್ರಿಕ ಪ್ರೇಮ ನಿಜವಾಗಲೂ ಹೆಂಡತಿ ಬಿಟ್ಟು ಪ್ರೇಯಸಿ ಪ್ರೀತಿಸಿದಂತೆ ಕಾಣಿಸುತ್ತದೆ'. ಹೊರನೋಟಕ್ಕೆ ಟೈಪಿಂಗ್ ಮಶಿನದ ಸ್ಥಿತಿ–ಗತಿ ಅದರ ವಯಸ್ಸಾದಂತೆ ರಿಪೇರಿ ಕಾರ್ಯ ಭರದಿಂದ ಸಾಗಿದೆ. ಒಳನೋಟಕ್ಕೆ ಆ ಮಶಿನ್ ಮೇಲೆ ಅತ್ಯಂತ ಪ್ರೀತಿ ಈಗಲೂ ಕೂಡ ಲೇಖಕರು ಕೆಂಪು ಕವರ ಹೊದಿಸಿ ತಮ್ಮ ಬೆಡ್ ರೂಮಿನಲ್ಲಿ ಇಟ್ಟಿದ್ದಾರೆ.

ಕೇವಲ ಜೀವಂತ ಪ್ರಾಣಿಗಳನ್ನು, ಮನುಷ್ಯರನ್ನು ಅಷ್ಟೇ ಪ್ರೀತಿಸಲಾರದೆ ನಾವು ನಮಗೆ ಅವಶ್ಯಕ್ ವಸ್ತಗಳ ಬಗ್ಗೆಯೂ ಅತಿಯಾದ ಪ್ರೀತಿ, ಸಲುಗೆಯುಂಟು.

ಈ ಪ್ರಬಂಧದಲ್ಲಿ ಲೇಖಕರ ಕಹಿ ಅನುಭವ ನಮಗೆ ಸಿಹಿ ಸಿಹಿ ಅನುಭವ. ಶೀರ್ಷಿಕೆ 'ಟೈಪರೈಟರ್ ಮೈ ಲವ್ವರ್' ಎಂದಾಗಿದ್ದರೆ ಸೂಕ್ತ.

**'ಶಿವಪ್ಪಾ ಕಾಯೋ ತಂದೆ'** : ಸುಖ ಇದ್ದಾಗ ನಾವು ಶಿವನನ್ನು ಧ್ಯಾನಿಸದವರು. ಆದರೆ ಕಷ್ಟ ಬಂದಾಗ ವೆಂಕಟರಮಣ. ಇಲ್ಲದ ಅಪವಾದಕ್ಕೆ ಎಡೆಯಾಗುವುದು. ಸೋಲಿನ ಕಹಿ ಅನುಭವ, ಯಾರೂ ಸಹಾಯಕ್ಕೆ ಬರದೇ ಇದ್ದಾಗ ಆತನ ನೈತಿಕತೆ ಕುಸಿಯುವುದು.

ಬ್ಯಾಂಕಿನ ಸಾಲ ತಗೆದುಕೊಂಡು ತೀರಿಸಲಾರದೆ ಒದ್ದಾಡು ಪರಿ ಇಲ್ಲಿ ಹಾಸ್ಯಮಯವಾಗಿ ಚಿತ್ರಿತವಾಗಿದೆ.

**'ವೀರಪ್ಪನ್ ಕ್ಷಮಾಪನ್'** : ಈ ಹಾಸ್ಯ ಬರಹದಲ್ಲಿ ಮಕ್ಕಳನ್ನು ಯಾವ ರೀತಿ ಸಂಸ್ಕಾರ ಕೊಟ್ಟು ಸಮಾಜದಲ್ಲಿ ಒಬ್ಬ ನಾಗರಿಕನನ್ನಾಗಿ ಮಾಡುವ ವಿಚಾರವನ್ನು ಲೇಖಕರು ಸೂಕ್ತವಾಗಿ ನೀಡಿದ್ದಾರೆ. ಮಕ್ಕಳ ಪಾಲನೆ-ಪೋಷಣೆಯಲ್ಲಿ ತಂದೆ-ತಾಯಿ ಅಷ್ಟೇ ಸಮಪಾಲುಗಾರರು.

**'ಎಂಥ ಚಮತ್ಕಾರವಂತು್ಯಾ ಈ ನಮಸ್ಕಾರ'** : 'ಸರ್ವಂ ನಮಸ್ಕಾರಮಮಂ ಜಗತ್' ಬಲ್ಲವರ ಮಾತಿನಂತೆ ಅಡಿಗರು ನಮಸ್ಕಾರ ಬಗ್ಗೆ ತಮ್ಮ ವಿಚಾರಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. 'ಈ ಬ್ರಹ್ಮಾಂಡಕೆ ತೊಟ್ಟು ಬಿಡು ಬ್ರಹ್ಮಾಸ್ತ್ರವಿಜಯೀಭವ' ಕೈಮುಗಿಯುವುದು ಸೌಜನ್ಯದ ಲಕ್ಷಣ, ಅಲ್ಲಿ ವಿನಮ್ರತೆ ಕೂಡ ಅಡಗಿರುತ್ತದೆ. 'ದುರ್ಜನಂ ಪ್ರಥಮಂ ವಂದೆ', ಕುವೆಂಪು ಅವರು ಹಳೆಬಿಡು ಬೇಲೂರು ಶಿಲೆ ಕುರಿತು 'ಬಾಗಿಲೊಳು ಕೈ ಮುಗಿದು ಒಳಗೆ ಬಾ ಯಾತ್ರಿಕನೆ'. ನಾವು ಏನಾದರು ಉದ್ದೇಶ ಇಟ್ಟುಕೊಂಡು ನಮಸ್ಕಾರ ಮಾಡುವುದು ಒಂದು ರೀತಿ. ಇನ್ನೊಂದು ಬೇಕಾಬಿಟ್ಟಿಯಾಗಿ ನಮಸ್ಕಾರ ಮಾಡುವುದು ಇನ್ನೊಂದು ಪರಿ. 'ನಮಸ್ಕಾರ ಅಂಭೋ ಚಮತ್ಕಾರ'.

ಲೇಖಕರು ನಾವು ದಿನನಿತ್ಯ ಯಾವ ಯಾವ ಭಂಗಿಯಲ್ಲಿ ನಮಸ್ಕಾರ ಮಾಡುತ್ತೇವೆ. ಅದರ ಬಗ್ಗೆ ಹಾಸ್ಯದ ಜೊತೆಗೆ, ಉದ್ದೇಶ ಬೆರಸಿ ವಿವರಣೆ ನೀಡಿದ್ದು ಸೂಕ್ತ.

ಇಂಗ್ಲೀಷನಲ್ಲಿ 'ಗುಡ್ ಮಾರ್ನಿಂಗ್', 'ಗುಡ್ ಆಫ್ಟರ್ ನೂನ್', 'ಗುಡ್ ಇವಿನಿಂಗ್', 'ಗುಡ್ ನೈಟ್', ಪದಗಳ ಬಳಕೆ ಆಗುತ್ತದೆ. ಆದರೆ ನಮ್ಮ ಕನ್ನಡದವರು ನಮಸ್ಕಾರ ಅಂದರ ಮುಗಿಯಿತು. ಈ ಹಾಸ್ಯ ಪ್ರಬಂಧ 'ಕರ್ಮವೀರ' ನವ್ಹೆಂಬರ್ ೯, ೧೯೯೭ ರಲ್ಲಿ ಪ್ರಕಟಗೊಂಡಿದೆ.

**'ಮಿ॥ ಕಂತು ಪ್ರಿಯ ಕಲಿಯುಗಿ'** : ದ್ವಾಪರಯುಗ ಶ್ರೀಕೃಷ್ಣನಿಗೆ ಸುದರ್ಶನ ಚಕ್ರವೇ ಆಯುಧ. ಬಲರಾಮನಿಗೆ ಹಲಾಯುಧ, ಶ್ರೀರಾಮನಿಗೆ ಬಾಣ, ಪರಶುರಾಮನಿಗೆ ಕೊಡಲಿ ಹೀಗೆ ಅವರವರಿಗೆ ಅವರವರದ್ದೇ ಆದ ಆಯುಧಗಳು ಅಂತೆಯೇ ಈ ಕಲಿಯುಗದ ಕಂತು ಪ್ರೀಯರಿಗೆ ಕಂತಾಯುಧವಿದೆ. ಒಂದೊಂದಾಗಿ ದುಬಾರಿ ವಸ್ತುಗಳನ್ನು ಗೆಲ್ಲುತ್ತ ಹೋಗುವ ಈ ಕಂತಾಯುಧಕ್ಕೆ ಶರಣಾಗತವಾಗದ ವಸ್ತುವೇ ಸಧ್ಯಕ್ಕಿಲ್ಲ.

'ಈ ಕಂತು ಪಿತನ ಕರುಣೆಯೊಂದಿರಲು ಕಣ್ಣಲಿ ನಂದನವನ ಕುಣಿಯುವುದು, ಮನೆಗೆ ಸ್ವರ್ಗವೇ ಇಳಿದು ಬರುವುದು' ಒಟ್ಟಿನಲ್ಲಿ ಕಂತಿನಿಂದ ಬೆಲೆಬಾಳು ಬೆಲೆಯ ಎಲ್ಲ ವಸ್ತುಗಳನ್ನು ಶ್ರೀಸಾಮಾನ್ಯರು ಪಡೆಯಲು ಅನುಕೂಲವಾಗಿದೆ.

**'ವಾಹ್! ಚೀಟ್ ಕಾ ಜವಾಬ್ ನಹೀ!!'** ಈ ಲೇಖನ ಓದಿದಾಗ 'ಸುಂಕಾಪುರ' ಅವರ 'ಮಾವಕೆಡಿಸಿದ ಕೋಟು' ಹಾಸ್ಯ ಪ್ರಬಂಧದ ಛಾಯೆ ಇದರ ಮೇಲಾಗಿರುವಂತೆ ಕಂಡು ಬರುವುದು.

**'ನಿಮಿಷಕ್ಕೊಂದು ಮಿನಿಟ್'** : 'ನಿಮಿಷಕ್ಕೊಂದು ಮಿನಿಟ್' ಲೇಖನವನ್ನು ಅರವತ್ತು ಮಿನಿಟ್ಟು ಓದಿದ್ರೂ ಅರ್ಥವಾಗಿಲ್ಲ. ಅದೊಂದು ಅರ್ಥವಾಗದ 'ಮಿನಿಟ್' ಅನ್ನೊಂಡೆ' ಡಾ॥ ಗುರುದೇವಿ ಹುಲೆಪ್ಪನವರಮಠ ಈ ರೀತಿ ತಮ್ಮ ಮುನ್ನುಡಿಯಲ್ಲಿ ಅಭಿಪ್ರಾಯವ್ಯಕ್ತಪಡಿಸುವರು.

ಮಂತ್ರಿಗಳಿಗೆ ಸಮಯದ ಪರಿಜ್ಞಾನವೇ ಇರುವುದಿಲ್ಲ. ಈ ಲೇಖನ ಓದಿದಾಗ ಸಮಯಪಾಲನೆ ಜೀವನಕ್ಕೆ ಎಷ್ಟು ಅವಶ್ಯಕತೆ ಇದೆ ಎಂಬುದನ್ನು ನಾನು ಕಲಿತುಕೊಂಡೆ.

**'ತಾಪತ್ರಯ'** : 'ಪಾರಗೋಳ ಕಾಲಾಗ ಸಾಕಾಗಿ ಹೋಗೇತಿ' ಎಂದು ಪತ್ನಿಯ ಅಳಲು ಪತಿಗೆ ಮನಮುಟ್ಟಲಾರದು. ಪತಿದೇವರಾಯ ಮನೆಯಲ್ಲಿ ಇದ್ದರೆ ಮಾತ್ರ ಮಕ್ಕಳ ಕಾಟ, ಸೂಟಿಯಲ್ಲಿ ಯಾವ ರೀತಿ ಎಂಬುದನ್ನು ಅರಿಯಬಹುದು.

ಇಲ್ಲಿ ಬಳಸಿಕೊಂಡ ಬಾಷೆ ಎಲ್ಲಾ ನಮ್ಮ ಉತ್ತರಕರ್ನಾಟಕದದ್ದು, ಅದರ ಜೊತೆಗೆ ಮರಾಠಿ ಹಾಗೂ ಇಂಗ್ಲೀಷಿನ ಪ್ರಭಾವ ಕಂಡು ಬರುತ್ತದೆ.

ಹೆಂಡತಿಯ ಸಲಹೆಯಂತೆ ಮಕ್ಕಳ ಕಾಟ ತಪ್ಪಿಸಲು 'ಸಮರ್ ಕ್ಯಾಂಪ್' ಸುರು ಮಾಡುವುದು ಇನ್ನೊಂದು ತಾಪತ್ರಯ. ತಾಪತ್ರಯ ಎಂದರೆ ತೊಂದರೆಗೆ ಸಿಲುಕುವುದು ಎಂದರ್ಥ.

**ಸ್ನೂನೀಜ್** : ಆಧುನಿಕ ರಾಜಕಾರಣಿಗಳ ಚಮಚಾಗಿರಿಯೇ ನಮ್ಮ 'ಸ್ನೂನೀಜಂ'. ಪಂಪ್ ಎನ್ನುವ ಶಬ್ದ ಬಳಕೆ ವಿಶಿಷ್ಟ ಅರ್ಥದಿಂದ ಕೂಡಿದೆ. 'ಪಂಪಿಸು' ಎಂದರೆ 'ಚಮ್ಚಾಗಿರಿ' ಎಂದರ್ಥ. ಈ ಸ್ನೂನೀಜಂರು ಸರ್ವಾಂತರಯಾಮಿಗಳು.

'ಕಾಮಾಪುರ್ತೆ ಮಾಮಾ' ಕಾಲಕ್ಕೆ ತಕ್ಕಂತೆ ಕತ್ತೆ ಕಾಲು ಹಿಡಿದು ನಮ್ಮ ಕಾರ್ಯ ಸಾಧಿಸುವುದು. ಈ ಪಂಪ ಪುರುಷರಿಗೆ ಪಂಪ ಪ್ರಶಸ್ತಿ ನೀಡುತ್ತಿದ್ದರೇನೋ? ಆದ್ರೆ ಆ ಕಾಲ ಅದಾಗಿರಲಿಲ್ಲವಲ್ಲ?

ಈಗ ಹಾಗಲ್ಲವಲ್ಲ! ಹೊಗಳುವ ಬಾಯಿಗೆ ಹೋಳಿಗೆ ತುಪ್ಪಾ ಹಾಕು' ಎನ್ನುವವರೇ ಇಂದು ಜಾಸ್ತಿಯಾಗಿರುವಾಗ... ಸ್ತೂನಿಷ್ಟರಿಗಂತೂ, ಖಂಡಿತವಾಗಿಯೂ ಇದು ಸುಕಾಲ. ಈ ಪ್ರಬಂಧ 'ಕರ್ಮವೀರ' ದಲ್ಲಿ ಆಗಸ್ಟ್ ೧೬, ೧೯೯೮ ರಂದು ಪ್ರಕಟಗೊಂಡಿದೆ.

**'ಗುರುತಿಸಿಕೊಳ್ಳುವುದು'** : 'ಗುಡ್ ಬೈ ಬಿಜಾಪುರ' ಹಾಸ್ಯ ಪ್ರಬಂದದ ಕೊನೆಯ ಹಾಸ್ಯ ಪ್ರಬಂಧವಾಗಿದ್ದು.

ನಮ್ಮ ನಾವು ಸಮಾಜ ಗುರುತಿಸಿಕೊಳ್ಳಬೇಕಾದರೆ ನಮಗೆ ಒಂದು ಹೆಸರು, ಅಡ್ಡ ಹೆಸರು ಅವಶ್ಯಕ. 'ಕೆಲವೊಬ್ಬರು ಹುಟ್ಟನಿಂದಲೇ ದೊಡ್ಡವರಾಗಿ ಹುಟ್ಟಿರುತ್ತಾರೆ. ಕೊಲವೊಬ್ಬರು ಹುಟ್ಟನಂತರ ಬೆಳೆದು ದೊಡ್ಡವರೆನಿಸಿಕೊಳ್ಳುವರು'.

ಕೆಲವು ಪ್ರಶಸ್ತಿಗಳಿಂದ ನಾವು ಮಾಡುವ ಸಂಶೋಧನೆಗಳಿಂದ ನಾವು ಮಾಡುವ ನೌಕರಿಯಿಂದ ಸಮಾಜದಲ್ಲಿ ನಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯ.

ಸರ್ಕಾರ ನಮ್ಮನ್ನು ಗುರುತಿಸಲು ರೇಶನ್ ಕಾರ್ಡು, ಗುರುತಿನ ಕಾರ್ಡು, ನೀಡಿದ್ದಾರೆ. ಆದರೂ ಇನ್ನಷ್ಟು ಗುರುತಿಸಿಕೊಳ್ಳುವುದು ನಮ್ಮ ಚಪಲ. ಈ ರೀತಿಯಾಗಿ ಇಲ್ಲಿಯ ಹದಿನಾಲ್ಕು ಪ್ರಬಂಧಗಳು ನಗೆಯೊಂದಿಗೆ, ಸಂದೇಶವನ್ನು ನೀಡುವ ರೀತಿ ಉತ್ಕೃಷ್ಟವಾದುದು.

**ಚಪ್ಪಾ ಚರಿಷ್ಮಾ :**

ಲೇಖಕರ ಲೇಖಕರ ನಾಲ್ಕನೆಯ ಹಾಸ್ಯ ಪ್ರಬಂಧ ಸಂಕಲನ ಇದಾಗಿದ್ದು, ಪ್ರಕಾಶಕರು 'ಬಾಗಲಕೋಟೆ ಸಾಹಿತ್ಯ ಸಮ್ಮೇಳನ'ದಲ್ಲಿ ಪ್ರಕಟಗೊಂಡಿರುವದು. ಇಲ್ಲಿಯ ಕೆಲವು ಹಾಸ್ಯ ಲೇಖನಗಳು 'ನಾಲಿಗೆಯ ಮೇಲೊಂದಿಷ್ಟು' ಹಾಸ್ಯ ಪ್ರಬಂಧಗಳಲ್ಲಿ ಎಡೆಪಡೆದುಕೊಂಡಿವೆ. ಅವುಗಳೆಂದರೆ 'ಸೂಕ್ಷೋಪಜೀವಿಗಳು, ಬೈಪಾಸ್', 'ಕಾಯುವ ಸೊಗಸು', 'ಹೆಸರು ಕೆಟ್ಟರೆ', 'ಕಳಕೊಳ್ಳುವಿಕೆ' ಲೇಖಕರು ಪುನಃ ಈ ಪ್ರಬಂಧದಲ್ಲಿ ಅಲ್ಪ ಸ್ವಲ್ಪ ಬದಲಾವಣೆಯಿಂದ ರಚಿಸಿರುವರು.

'ಜನಮತರಂಗದಲ್ಲಿ' ಮೇ ೧೩, ೨೦೦೨ ರಂದು 'ಕೇಶವ ಉಮಜಿ' ಪುಸ್ತಕಾವಲೋಕನದಲ್ಲಿ 'ಹಾಸ್ಯ ಪ್ರಬಂಧ ಸಮ್ಮೇಳನ' ಎಂಬ ಶೀರ್ಷಿಕೆ ಅಡಿಯಲ್ಲಿ ಚಪ್ಪಾ ಚರಿಷ್ಮಾ ಕೃತಿ ಕುರಿತು ವಿಮರ್ಶೆ ಕೈಕೊಂಡಿದ್ದಾರೆ.

ಬಾಗಲಕೋಟೆ ಜಿಲ್ಲೆಯಲ್ಲಿ ಜರುಗಿದ ಅಖಿಲ ಭಾರತ ೬೮ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸ್ವಾಗತ ಸಮಿತಿಯವರು ಪ್ರಕಟಿಸಿದ ೬೮ ಪುಸ್ತಕಗಳಲ್ಲಿ ಇದು ಒಂದು.

ಲೇಖಕರು ಕೃತಿಗೆ ನಾಮಕರಣ ಮಾಡಿದ್ದು ಸೂಕ್ತವಾಗಿದೆ. ಇದೊಂದು ೧೫ ಪ್ರಬಂಧಗಳಿಂದ ಕೂಡಿದ್ದು, ಕೆಲವು ಹಾಸ್ಯದ ಒಗ್ಗರಣೆ ಕೊಟ್ಟಿದ್ದರೆ, ಕೆಲವು ಪೂರ್ತಿ ಹಾಸ್ಯ ರಸಾಯನಗಳೇ ಆಗಿವೆ.

'ಹೂಗಳ ಲೋಕ' ಇದು ಮೊದಲ ಪ್ರಬಂಧ ಪುರಾತನ ಸಂಸ್ಕೃತ ಕವಿಗಳಾದ ಭವಭೂತಿ ಕಾಳಿದಾಸನಿಂದ ಹಿಡಿದು ಕನ್ನಡ ನವೋದಯದ ಡಾ॥ ದ. ರಾ. ಬೇಂದ್ರೆ, ಜಿ. ಪಿ. ರಾಜರತ್ನಮಂರಲ್ಲದೇ

ಅನುಭಾವ ಕವಿ ಮಧುರಚೆನ್ನರ ಮತ್ತು ನವ್ಯಕವಿ ರಾಜರತ್ನಂರಲ್ಲದೇ ಅನುಭಾವ ಕವಿ ಮಧುರಚೆನ್ನರ ಕಾವ್ಯಗಳಲ್ಲಿ 'ಹೂವನ್ನು' ಹೇಗೆ ಬಳಸಿಕೊಂಡಿದ್ದಾರೆ, ಎಂಬುದನ್ನು ಮಾರ್ಮಿಕವಾಗಿ ವಿವರಿಸಿದ್ದಾರೆ. ಇದು ವಿದ್ಯಾರ್ಥಿಗಳಿಗೆ 'ಹೂವ'ನ್ನು ಕುರಿತು ಪ್ರಬಂಧ ಬರೆಯಲು ಅತ್ಯಪಯುಕ್ತ ಮಾರ್ಗದರ್ಶಿ ಎಂದರೆ ತಪ್ಪಾಗಲಿಕ್ಕಿಲ್ಲ.

'ಕನ್ನಡಕ' ಧಾರಿಗಳ ಕುರಿತು ಬರೆದದ್ದು, 'ಕೀಲಿ'ಯನ್ನು ಕುರಿತಾದ 'ಅಬ್ಬಬ್ಬಾ... ಈ ಬೀಗತನವೇ! ಲೇಖನವೂ ಹಾಸ್ಯ ರಸಾಯನ. ಪ್ರವಾಸದಿಂದ ಬಂದಮೇಲೆ ಕೀಲಿ ತೆಗೆಯಲು ಸಹಾಯ ಮಾಡಿದವನು 'ವಿಠ್ಠಲ', ಇದು ಒಂದು ಸಾಂಕೇತಿಕ ಹೆಸರು. 'ಮಂಗನ ಬಾಲದ ಸುತ್ತ' ಪ್ರಬಂಧದಲ್ಲಿ ಬಾಲ್ಯದ ನೆನಪುಗಳ ಮೇಲಕುನೋಟವಿದೆ.

'ಸೂಕ್ಷೋಪಜೀವಿಗಳು' ಮಾತಿನ ಬಳಕೆಯಲ್ಲಿ ಸೂಕ್ಷ್ಮತೆಯನ್ನು ಕುರಿತು ಸೂಚಿಸಿದ್ದಾರೆ. ಕಛೇರಿಗಳು ಬಳಸುವ ದೀರ್ಘ ಶಬ್ದಗಳ ಬದಲಾಗಿ ಸಂಕ್ಷಿಪ್ತಗೊಳಿಸುವ ವಿಧಾನವನ್ನು ಈಗಿನ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಬಳಸುವಂತೆ 'Longform' ಗಳನ್ನು 'Shortform' ಗೊಳಿಸುವದನ್ನೇ ಸೂಕ್ಷ್ಮವಿಧಾನವೆಂದೂ ಅದನ್ನು ಬಳಸುವವರು ಸೂಕ್ಷೋಪಜೀವಿಗಳೆಂದೂ ಹೇಳಿದ್ದಾರೆ.

ಜೀವನದಲ್ಲಿ ಕಳೆಕೊಂಡವರ ಸಂಖ್ಯೆ ಜಾಸ್ತಿ. ಅವರ ಕಳೆದುಕೊಂಡಿದ್ದ ಕುರಿತ ಲೇಖನ 'ಕಳಕೊಳ್ಳುವುದು'. ಅದರಂತೆ ಹತ್ತಿರದ ಮಾರ್ಗ 'ಬೈಪಾಸ್', 'ಕಾಡುವ ಹೆಂಡತಿ ಲೇಸು' ಆತನ ತತ್ವಜ್ಞಾನಿ ಆಗಬಹುದು. 'ನಿರ್ಲಜ್ಜಂ ಸದಾ ಸುಖಿ' ಎನ್ನುವಂತೆ 'ಹೆಸರು ಕೆಟ್ಟರೆ ಒಳಿತು' ಎಂಬುದು ಒಂದು ಲೇಖನ, ಒಳಗೆ ಏನೇ ಇರಲಿ ಹೊರಗೆ ಮಾತ್ರ. ಭಾರೀ ತೋರಿಸಿಕೊಳ್ಳುವ 'ಬಹಿರಂಗ ಪ್ರಿಯರು' ಲೇಖನ ಸಮಾಜಕ್ಕೆ ಹಿಡಿದ ಕನ್ನಡಿಯಾಗಿದೆ. ನಿಮ್ಮ ಬಗ್ಗೆ ಬೇರೆಯವರು ಮಾತನಾಡುವದನ್ನು 'ಉದರದುರಿತ'ದಲ್ಲಿ ಕಾಣುವಿರಿ. ಇನ್ನು ನಾವು ಎಲ್ಲೋ ಹೊರಟು ನಿಂತಾಗ ನಾವು ಹೋಗಬೇಕಾದ ಕಡೆ ಬಸ್ಸು ಬರುವದೇ ಇಲ್ಲ. ಅದರಂತೆ ಜೀವನದಲ್ಲಿ 'ಕಾಯುವದು' ನಮ್ಮ ಜನ್ಮಸಿದ್ಧ ಹಕ್ಕಿನಂತೆ ಒತ್ತಾಯದಿಂದ ಕಾಯಲು ಹಚ್ಚುತ್ತದೆ. 'ಜನಪ್ರಿಯ ಎಂಬೋ ಉಪಾಧಿ', 'ಅತಿಥಿ ರಾಯರು' ಮತ್ತು 'ಬೆಂಗಳೂರೀ ಸಂಚಾರಿ ಸಖಿಗೊಂದು ಪ್ರೇಮಪತ್ರ'ಗಳು ಹಾಸ್ಯದ ಲೇಪದೊಂದಿಗೆ ಇತ್ತ ಪ್ರಬಂಧವೂ ಅಲ್ಲದ ಅತ್ತ ಹಾಸ್ಯ ಲೇಖನವೂ ಅಲ್ಲದಂತೆ ಎರಡೂಗಳ ಮಧ್ಯದ ಸಮ್ಮಿಳಿತ ಲೇಖನಗಳು ಎಂದರೆ ತಪ್ಪಾಗಲಿಕ್ಕಿಲ್ಲ.

ಒಟ್ಟಿನ ಮೇಲಿನ ಲೇಖನಗಳಲ್ಲಿಯೂ ನವಿರಾದ ಹಾಸ್ಯವಿದೆ. ಯಾರನ್ನೇ ಆಗಲಿ ಗುರಿಯನ್ನಾಗಿ ಇಟ್ಟುಕೊಳ್ಳದೇ ಕೆಲವಡೆಯಂತೂ ತಮ್ಮನ್ನೇ ತಾವು ಗುರಿ ಮಾಡಿಕೊಂಡು ಹಾಸ್ಯ ಪ್ರದರ್ಶಿಸುವುದು. ಮಲ್ಲಿಕಾರ್ಜುನ ಹುಲಗಬಾಳಿಯವರ ವಿಶೇಷತೆ. ಒಬ್ಬರ ಅಪಹಾಸ್ಯ ಮಾಡಿ, ಅವರ ಮನ ನೋಯುವಂತೆ ಬರೆದು ತೃಪ್ತಿ ಪಡುವ ಕುಚೇಷ್ಟೆಯ ಕುಯುಕ್ತಿಯ ಸಾಹಿತಿಯಲ್ಲ.

### ನಾಲಿಗೆಯ ಮೇಲೊಂದಿಷ್ಟು :

'ನಾಲಿಗೆ ಒಳ್ಳೆಯದಾದರೆ, ನಾಡೆಲ್ಲಾ ಒಳ್ಳೆಯದು' ಗಾದೆ ಮಾತು. 'ಎಲವೋ ಎಂದರೆ ನರಕ, ಅಯ್ಯಾ ಎಂದರೆ ಸ್ವರ್ಗ' ವಚನದ ನುಡಿಯಂತೆ ನಮ್ಮ ಸಾಹಿತಿಗಳಾದ ಹುಲಗಬಾಳಿಯವರ

ಒಟ್ಟು 'ಹದಿನೆಂಟು' ಪ್ರಬಂಧಗಳ ಹಾಸ್ಯ ಸಂಕಲನವಾಗಿದೆ. ಆದರೆ 'ಚಷ್ಮಾ ಚರಿಷ್ಮಾದಲ್ಲಿ' ಹತ್ತು ಹಾಸ್ಯ ಪ್ರಬಂಧಗಳು ಈಗಾಗಲೇ ಪ್ರಕಟಗೊಂಡಿವೆ. ಈ ಪುಸ್ತಕ ೭೮ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ೭೮ನೆಯ ಪುಸ್ತಕವಾಗಿ ಪ್ರಕಟಗೊಂಡಿದೆ. ಆದರೆ ಲೇಖಕರು ಅಲ್ಲಿಯ ಈ ಹತ್ತು ಪ್ರಬಂಧಗಳನ್ನು ಅಲ್ಪಸ್ವಲ್ಪ ತಿದ್ದಿ ಪುನಃ 'ನಾಲಿಗೆಯ ಮೇಲೊಂದಿಷ್ಟು' ಹಾಸ್ಯ ಪ್ರಬಂಧ ಸಂಕಲನದಲ್ಲಿ ಪುನಃ 'ನಂದ ಪ್ರಕಾಶನ' ಬನಹಟ್ಟಿಯಿಂದ ಪ್ರಕಾಶನಕ್ಕೆ ಒಳಪಡಿಸಿ ಪ್ರಕಟಿಸಿದ್ದಾರೆ.

ಇನ್ನು ಉಳಿದ ಏಳು ಪ್ರಬಂಧಗಳು ಮಾತ್ರ ನಮಗೆ ಹೊಸತಾಗಿ ಕಂಡು ಬರುವುವು. ಅವುಗಳೆಂದರೆ 'ಕುರ್ಚಿಯ ಸುತ್ತೊಂದು ಗಿರಕಿ', 'ಗುಂಪಿನನೊಳಗನ ಗೋವಿಂದ', 'ಕೈಯಲ್ಲೊಂದು ಪತ್ರಿಕೆ ಇದ್ದರೆ', 'ಮಂಗನ ಬಾಲ', 'ಹೊಟ್ಟೆ ಉರಿಸುವವರು', 'ಮೂರು.... ಮತ್ತೊಂದು', 'ನಾಲಿಗೆಯ ಮೇಲೊಂದಿಷ್ಟು'. ಇನ್ನೊಂದು 'ಕಲ್ಲರಳಿ ಹೂವಾಗಿ' ಅವರ ಏಳನೆಯ ಪ್ರಬಂಧ ಸಂಕಲನದಲ್ಲಿ ತನ್ನ ಸ್ಥಾನ ಪಡೆದುಕೊಂಡಿದೆ. ಆದರೆ ಶೀರ್ಷಿಕೆ ಮಾತ್ರ ಒಂದೇ ಆದರೂ ವಿಷಯ ಮಾತ್ರ ವಿಭಿನ್ನ. ಲೇಖಕರು ಈ ಪ್ರಬಂಧಕ್ಕೆ 'ಹೂಗಳ ಲೋಕ' ಎಂಬ ಶೀರ್ಷಿಕೆ ಸೂಕ್ತವಾದುದು. ಇದನ್ನು ಈಗಾಗಲೇ ಲೇಖಕರು ಚಷ್ಮಾ ಚರಿಷ್ಮಾದಲ್ಲಿ ಪ್ರಕಟಣೆಗೊಳಿಸಿದ್ದಾರೆ.

ಬೇಲೂರು ರಾಮಮೂರ್ತಿ ಅವರು – ಮುನ್ನುಡಿಯಲ್ಲಿ ಈ ರೀತಿಯಾಗಿ ಈ ಪುಸ್ತಕದ ಬಗ್ಗೆ ಅನಿಸಿಕೆ ವ್ಯಕ್ತಪಡಿಸಿರುವರು. "ಮೂರು ಮತ್ತೊಂದು', 'ಕೈಯಲ್ಲೊಂದು ಪತ್ರಿಕೆ ಇದ್ದರೆ', 'ಹೆಸರು ಕೆಟ್ಟರೆ' ಮುಂತಾದವುಗಳು ಏಕೋ ತಮ್ಮ ರೆಕ್ಕೆ ಪುಕ್ಕಗಳನ್ನು ಮುಂದುವರಿಸಿಕೊಂಡಿವೆಯೇನೋ ಅನಿಸುತ್ತದೆ".[೧೦]

ಒಂದು ವಿಷಯದ ಎಲ್ಲಾ ಮುಗ್ಗಲುಗಳನ್ನು ತಡವರಿಸುವ, ನೇವರಿಸುವ, ಬಚ್ಚಿಡುವ ಒಂದು ಅನನ್ಯ ಶಕ್ತಿ ಪ್ರಬಂಧಕ್ಕಿದೆ. ಲೇಖಕರು ಆ ಶಕ್ತಿಯನ್ನು ಚೆನ್ನಾಗಿ ಬಳಸಿಕೊಳ್ಳಬೇಕು.

'ವೈವಿಧ್ಯಮಯವಾದ ವಿಷಯಗಳನ್ನು ಆರಿಸಿಕೊಂಡು ಬರೆಯುವ ಚಾಕಚಕ್ಯತೆಯಿರುವ ಶ್ರೀ ಮಲ್ಲಿಕಾರ್ಜುನ ಹುಲಗಬಾಳಿಯವರಿಂದ ಕನ್ನಡ ಸಾರಸ್ವತ ಲೋಕಕ್ಕೆ ಇನ್ನಷ್ಟು ಉತ್ತಮ ಪ್ರಬಂಧ ಸಂಕಲನಗಳು ಬರಲಿ' ಹಾರೈಕೆ ಮುಂದಿನ ಪ್ರಬಂಧಗಳಿಂದ ಫಲಿಸಿದಂತಾಗಿದೆ.

ಶ್ರೀಕಾಂತ ಪಾಟೀಲ ಕೊನೆಗೊಂದಿಷ್ಟು (ಬೆನ್ನುಡಿ) ಈ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆ. 'ಸಮಾಜ ಅನ್ಯಾಯ, ಓರೆಕೋರೆ ತಿದ್ದಲಿಕ್ಕೆ ಲೇಖಕರು ಹಾಸ್ಯ ಪ್ರಬಂಧಗಳೆಂಬ ಅಸ್ತ್ರವನ್ನು ಬಳಸಿಕೊಂಡಿದ್ದಾರೆ. ಸಾಮಾಜಿಕ ಕಳಕಳಿ ಲೇಖಕರ ಬರವಣಿಗೆಯಲ್ಲಿ ಕಂಡು ಬರುತ್ತದೆ'.

'ಕುರ್ಚಿ ಸುತ್ತೊಂದು ಗಿರಕಿ' ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಬಿ.ಎ. ಭಾಗ–೧ ರ, ಅವಶ್ಯಕ ಪತ್ರಿಕೆ ಪಠ್ಯ ಭಾಗದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

'ಪ್ರಬಂಧ ಸಂಪದ' ೨೦೦೫–೦೬ ರಲ್ಲಿ ಪಠ್ಯಪುಸ್ತಕವಾಗಿದೆ. ಅದರಲ್ಲಿ ಸಂಪಾದಕರಾದ ಡಾ॥ ಆರ್. ಬಿ. ಚಿಲುಮಿ, ಪ್ರೊ. ಜಿ. ವ್ಹಿ. ಮಳಗಿ. 'ಕುರ್ಚಿಸುತ್ತೊಂದು ಗಿರಕಿ' ಪ್ರಬಂಧವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಈ ಪ್ರಬಂಧವನ್ನು ಹುಲಗಬಾಳಿಯವರ 'ನಾಲಿಗೆಯ ಮೇಲೊಂದಿಷ್ಟು' ಎಂಬ

---

೧೦. : 'ನಾಲಿಗೆಯ ಮೇಲೊಂದಿಷ್ಟು' : ಬೇಲೂರು ರಾಮಮೂರ್ತಿ – ಮುನ್ನುಡಿ – ಪು.ಸಂ. : V

ಲಲಿತ ಪ್ರಬಂಧ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಇದು 'ನಗೆ ಮುಗುಳು', ರಾಜ್ಯ ಮಟ್ಟದ ಲೇಖನ ಸ್ಪರ್ಧೆಯಲ್ಲಿ (೨೦೦೩ ರಲ್ಲಿ) ಪ್ರಥಮ ಬಹುಮಾನ ಪಡೆದಿದೆ.

ಪ್ರಸ್ತುತ ಪ್ರಬಂಧವು ಅಡಿಗರ ಕವಿತೆಯ ಸಾಲುಗಳಿಂದ ಪ್ರಾರಂಭವಾಗುತ್ತದೆ. ಸಿಪಾಯಿಯಿಂದ ಹಿಡಿದು ಮಂತ್ರಿ ಮಹೋದಯರ ವರೆಗೆ; ಸಾಮಾನ್ಯನಿಂದ ಹಿಡಿದು ಮಠಾಧೀಪತಿಯವರೆಗೂ ಕುರ್ಚಿಯ ಮಹತ್ವ ಮತ್ತು ಅದಕ್ಕಂಟಿಕೊಂಡವರ ಸ್ಥಿತಿಗತಿಗಳ ಕುರಿತು ವ್ಯಂಗ್ಯ ವಿಡಂಬನೆಗಳ ಮೂಲಕ ದೃಷ್ಟಾಂತಗಳೊಂದಿಗೆ ಚರ್ಚಿಸಿದ್ದಾರೆ.

ಆದಿಮಾನವ ಕಲ್ಲು ಬಂಡೆಯ ಸಿಂಹಾಸನದಿಂದ ಹಿಡಿದು ಇಂದಿನ ಐಟಿ ಯುಗದ ಹೈಟೆಕ್ ಕುರ್ಚಿಗಳ ವರೆಗೆ ನಿರಂತರವಾಗಿ ಜೀವನಯುದ್ಧ, ಕುರ್ಚಿಯುದ್ಧ ನಡೆಯುತ್ತ ಬಂದ ಚರಿತ್ರೆಯನ್ನು ಈ ಪ್ರಬಂಧ ಕಥಿಸುತ್ತದೆ. 'ಕುರ್ಚಿಯಲ್ಲಿ ಕುಳಿತವರಿಗೆ ಕುತ್ತುಗಳಧಿಕ' ಎಂಬುದು ಗೊತ್ತಿದ್ದು ಹಣಾ ಹಣಿ ನಡೆಯುತ್ತಿರುವುದನ್ನು ಕಂಡು ಲೇಖಕರ ಮಾರ್ಮಿಕವಾಗಿ ಕುಟುಕಿದ್ದಾರೆ.

ನಾಲ್ಕು ಕಾಲುಗಳಿರುವ ಕುರ್ಚಿಗಳು ವಿವಿಧ ಪ್ರಕಾರಗಳಲ್ಲಿವೆ. ಕಟ್ಟಿಗೆ, ಕಬ್ಬಿಣ ಕುರ್ಚಿಗಳೆಂದು ಎರಡು ರೀತಿ. ಆದರೆ ಅವು ಬಣ್ಣ ಕಲಾತ್ಮಕತೆಗೆ ಹೆಸರುವಾಸಿಯಾಗಿದೆ. ಮಹಾರಾಜ, ಮೆತ್ತನೆಯ ರೋಟೆಟಿಂಗ್, ಪುಷ್‌ಬ್ಯಾಕ್, ಸಾಹುಕಾರಿ ಕುರ್ಚಿ, ಗೋಲಾಕಾರದ ಮಠಾಧೀಶರ ಕುರ್ಚಿಗಳು, ಒಂದು ತೆರ, ಹಜಾಮನಂಗಡಿಯ ಕುರ್ಚಿ, ವಿವಿಧ ತೆರನಾದ ವೃತ್ತಿಗಾರರು ತಮ್ಮ ಕುರ್ಚಿಗಳನ್ನು ಸಿದ್ಧಪಡಿಸಿಕೊಂಡಿರುತ್ತಾರೆ.

ಕುರ್ಚಿ ಅಧಿಕಾರ, ಅಂತಸ್ತು, ದರ್ಪ, ದರ್ಜೆಯ ಸಂಕೇತವಾಗಿದೆ. ಕೆಲವ್ರೊಬ್ಬರು ಕುರ್ಚಿಯಿಂದ ಪ್ರತಿಷ್ಠೆಗೆ ಬಂದರೆ, ಕೆಲವರಿಂದ ಕುರ್ಚಿಗೆ ಮಹತ್ವ ಬರುತ್ತದೆ. ಉದಾ : ಅಬ್ದುಲ್ ಕಲಾಮ, ಸಿ. ರಾಜ ಗೋಪಾಲಚಾರಿ, ಡಾ॥ ರಾಧಾಕೃಷ್ಣನ್ ಮುಂತಾದವರನ್ನು ಹೆಸರಿಸಬಹುದು. ಕುರ್ಚಿಯಿಂದ ಪ್ರತಿಷ್ಠೆಗೆ ಬರುವರು – ರಾಜಕಾರಣಿಗಳು ತಾಲೂಕ, ಜಿಲ್ಲಾ ಪಂಚಾಯತಿ ಅಧ್ಯಕ್ಷರು, ಪ್ರಧಾನಿಗಳು, ಮುಖ್ಯ ಮಂತ್ರಿಗಳಾಗಿ ಅಧಿಕಾರ ಹೊಂದಿದಾಗ ಅವರಿಗೆ ಸಮಾಜದಲ್ಲಿ ಕಿಮ್ಮತ್ತು ಸಿಗುವುದು.

ಕುರ್ಚಿಗಾಗಿ ಬಡೆದಾಡುವ ರಾಜಕೀಯ ಧುರೀಣರ ಈ ಸಿನಿಕತನ ಜನಸಾಮಾನ್ಯರಿಗೆ ಹಾಸ್ಯವಾಗಿ ಕಂಡುಬರುವುದು.

'ಸಂಸಾರಿಕರ ಕುರ್ಚಿ ಬೇರೆ, ಕಾವಿಯ ಧರಿಸಿದ ವರ ಕುರ್ಚಿ ಬೇರೆ. ನಮ್ಮ ಕುರ್ಚಿ ಮೇಲೆ ಭಕ್ತಿಯಾದರೆ, ಅವರದು ವಿರಕ್ತರ ಕುರ್ಚಿಯು ಅನುರಕ್ತಿ ಅಲ್ಲಿರುತ್ತದೆ. ವೇದಿಕೆಯ ಮೇಲೆ ತಾವು ಪವಡಿಸಬೇಕಾದ ಕುರ್ಚಿಯು ಎತ್ತರದಲ್ಲಿ ಕಮ್ಮಿಯಾಯಿತೆಂದು ಕೋಪಗೊಂಡು ಸಭಾತ್ಯಾಗ ಮಾಡಿದ ಸರ್ವಸಂಗತ್ಯಾಗಿಗಳೂ ನಮ್ಮಲ್ಲಿದ್ದಾರೆಂಬ ವಿಡಂಬನೆ ಅರ್ಥಪೂರ್ಣವಾಗಿದೆ.

ಕುರ್ಚಿಯ ಸರ್ವಸ್ವ ಅಲ್ಲ. ಕುರ್ಚಿ ಇಲ್ಲದಿದ್ದರೂ ಜನಸಾಮಾನ್ಯರು ನೆಲದ ಮೇಲೆ ಕುಳಿತು ಸುಖ–ಸಂತೋಷ, ನೆಮ್ಮದಿ ಪಡಬಹುದಾಗಿದೆ.

**ಈ ಒಂದು ಲೇಖನ ಕರ್ನಾಟಕ ಸುವರ್ಣ ಮಹೋತ್ಸವ ಲಲಿತ ಪ್ರಬಂಧಗಳ ಪ್ರಕಟನೆಯಲ್ಲಿ ಪ್ರಕಟಗೊಂಡಿದ್ದು, ಒಂದು ವಿಶೇಷ – ಗುಂಪಿನೊಳಗನ ಗೋವಿಂದ : 'ಇಂದಿನ ಬಾಲಕ ನಾಳಿನ**

ನಾಗರಿಕ', 'ದುಡ್ಕೊಂಡಾಂಗ ದೊಡ್ಡಸ್ತಿಕೆ' ಅಂದರೆ ಶ್ರಮವಿಲ್ಲದೆ ಜೀವನ ಮಾಡಿದರೆ ವ್ಯರ್ಥ.

ಒಂದು ಗುಂಪಿನ ಮುಖಂಡ ಮಾತ್ರ ಜನರಿಗೆ ಚಿರಪರಿಚನಾಗುವನು. ಆದರೆ ಗುಂಪಿನಲ್ಲಿಯ ಜನರು ಅನಾಮಧೇಯರಾಗಿ ಉಳಿಯುವರು. ಶ್ರೀಕೃಷ್ಣನು ಸ್ಟಾರ್ ವ್ಯಾಲ್ಯೂ ರುಕ್ಮಿಣಿ-ಸತ್ಯಭಾಮೆಗೆ ಕೊಡುವನು. ಇನ್ನುಳಿದ ೧೬ ಸಾವಿರ 'ಗೋಪಿಕಾಸ್ತ್ರೀಯರು' ಅಪರಿಚಿತರಾಗಿ ಉಳಿಯುವರು.

ಗಜ-ಅಜಕ್ಕೆ ಸಾಕಷ್ಟು ವ್ಯತ್ಯಾಸವಿದೆ. 'ನನಗಂತೂ ಗಜ (ಗಣ್ಯಜನ) ಕ್ಕಿಂತಲೂ ಅಜ (ಅಲ್ಪಜನ)ದ ಮೇಲೆ ಸ್ಪೇಷಲ್ ಪ್ರೀತಿ. ಇವರೆಲ್ಲ ಸ್ವಂತ ಗುಂಪು ಕಟ್ಟಿಕೊಂಡು ಮೆರೆಯುವ ಪಾಳೇಗಾರರೇನಲ್ಲ. ಗುಂಪಿನೊಳಗೆ ಗೋವಿಂದೆಂಬ ಅನಾಮಧೇಯರು'.

"ಲೇಖಕರು ಕೊಡುವ ಕೆಲವು ವ್ಯಕ್ತಿಗಳ ಬಗ್ಗೆ ಹೀಗೆ ಹೇಳುವರು. ಹಾಲು ಹಾಕುವ ತುಂಗವ್ವ, ಪೇಪರ ಹುಡುಗ ಕೃಷ್ಣ, ಸೈಕಲಂಗಡಿಯ ಶಮಶೋದ್ದಿನ್, ಕಾಯಪಲ್ಯೆ ಮಾರುವ ಮಾರುತಿ, ಟೇಲರ್ ವಸಂತ, ಡಬ್ಬಾ ಚಾದಂಗಡಿಯ ಕಲ್ಲೂ, ಆಫೀಸ್ ಬಾಯ್ ಸಿದ್ರಾಮ, ಬಸ್ಟ್ಯಾಂಡಿನಲ್ಲಿ ಹಮಾಲಿ ಕೆಲಸ ಮಾಡುವ ಹಾರೂನಸಾಬ್... ತನ್ನ ಏರಿಯಾದ ಎಲ್ಲ-ಎಲ್ಲರ ಹೆಸರು - ವಿಳಾಸ ಕಂಠ ಪಾಠ ಮಾಡಿದ್ದರೂ, ಅವರೆಲ್ಲರಿಗೂ ಇವತ್ತಿಗೂ ಅನಾಮಧೇಯನಾಗಿಯೇ ಉಳಿದುರುವ ಪೋಸ್ಟ್‌ಮನ್ ಗಂಗಯ್ಯ, ಮೀಟರ್ ರೀಡರ್ ಹಣ್ಮಂತ... ಇಂಥವರೆಲ್ಲ ನಮ್ಮ ಪ್ರಿಯ 'ಗುಂಗೋ'ಗಳೇ!."[೧೧]

ಸಿನಿಮಾ ನಟ-ನಟಿಯರ ಸಹನಟ-ನಟಿಯರು 'ಗುಂಗೋಗಳು' ಗುಟ್ಟಿಮೇಳ ವಾದಕರು ಕಾಂಪೋಜಿಟರಗಳು, ಶ್ರಮಿಕರು, ಚಮ್ಮಾರರು, ಮಾಣಿಗಳು, ದೊಡ್ಡ ಗುಂಗೋ'ಗಳ ಬಳಗವಿದೆ.

ಗಜಗಳು 'ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ರೀತಿಯಲ್ಲಿ ಜೀವಿಸಿದ್ದಾರೆ. ಆದರೆ 'ಗುಂಗೋ'ಗಳು ಮಾತ್ರ ಅತಿ ಸಿಂಪಲ್ (ಸೀದಾಸಾದಾ) ಬದುಕು. ಸಂತೆಯಲ್ಲಿ ಈತ ಸ್ಥಿತ ಪ್ರಜ್ಞನಾಗಿರುತ್ತಾನೆ. 'ಗುಂಗೋ', 'ಆಳಾಗಿ ದುಡಿದು, ಅರಸನಾಗಿ ಉಣ್ಣುವ ರೀತಿ ಗೊತ್ತು', ಪ್ರತಿಯೊಂದು ಕೆಲಸ-ಕಾರ್ಯ, ಮನರಂಜನೆ ಸಭೆ-ಸಮಾರಂಭ ಬಂದಾಗಲೂ ಆತ ಸ್ವತಂತ್ರ, ಸಂಸಾರದ ಸಾರ ಸವಿಯಲು ಬಲ್ಲವ ಅಂದರೆ ಸಂಸಾರದಲ್ಲಿ ಸೊನ್ನೆ ತೆಗೆದಾಗ ಸಸಾರ ಆಗುವಂತೆ ತನ್ನ ನಿಜಜೀವನದಲ್ಲಿ ಸುಖಿ ಪುರುಷ ಅವನೇ, ನಮ್ಮ ಗಂಗೋ ಆದರೆ ಗಂಡು ಗೋವಿಂದ ಎಂದರ್ಥ.

ಆತನು ದುಡಿದು ಹೆಂಡತಿ ಮಕ್ಕಳ ಜೊತೆಗೆ ಸಂಸಾರ ಸುಖವಾಗಿ ಮಾಡಿ, ಯಾವುದೇ ಚಿಂತೆಯಿಲ್ಲದೆ ಬದುಕಿ ನಂತರ ಸೂರ್ಯಸ್ತದಿಂದ ದಣಿವು ಕಳೆದು ಸೂರ್ಯೋದಯಕ್ಕೆ ಹೊಸ ಮನುಷ್ಯನಾಗಿ ಕಾರ್ಯನಿರ್ವಹಿಸುತ್ತಾನೆ.

ಇದ್ದುದರಲ್ಲಿಯೇ ಸಂತೋಷ ಕಾಣುವ ಸುಖಿಗಳು ಬದುಕಲು ತಿಳಿದವನು ಶ್ರೇಷ್ಠ ಬದುಕಿನಲ್ಲಿ ಸಂತೋಷವೇ ಮುಖ್ಯ. 'Small is always beautiful' ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು, ಎನ್ನುವಂತೆ 'ಗುಂಗೋ'ಗಳು ಪ್ರಸಿದ್ಧಿಪಡೆದಿದ್ದಾರೆ.

---

೧೧. 'ನಾಲಿಗೆಯ ಮೇಲೊಂದಿಷ್ಟು' : ಮಲ್ಲಿಕಾರ್ಜುನ ಹುಲಗಬಾಳಿ - ಪು.ಸಂ. - ೧೬

ನಾಗರಿಕೆ, 'ದುಡ್ಕೊಂಡಾಂಗ ದೊಡ್ಡಸ್ತಿಕೆ' ಅಂದರೆ ಶ್ರಮವಿಲ್ಲದೆ ಜೀವನ ಮಾಡಿದರೆ ವ್ಯರ್ಥ.

ಒಂದು ಗುಂಪಿನ ಮುಖಂಡ ಮಾತ್ರ ಜನರಿಗೆ ಚಿರಪರಿಚನಾಗುವನು. ಆದರೆ ಗುಂಪಿನಲ್ಲಿಯ ಜನರು ಅನಾಮಧೇಯರಾಗಿ ಉಳಿಯುವರು. ಶ್ರೀಕೃಷ್ಣನು ಸ್ಟಾರ್ ವ್ಯಾಲ್ಯೂ ರುಕ್ಮಿಣಿ-ಸತ್ಯಭಾಮೆಗೆ ಕೊಡುವನು. ಇನ್ನುಳಿದ ೧೬ ಸಾವಿರ 'ಗೋಪಿಕಾಸ್ತ್ರೀಯರು' ಅಪಚಿರತರಾಗಿ ಉಳಿಯುವರು.

ಗಜ-ಅಜಕ್ಕೆ ಸಾಕಷ್ಟು ವ್ಯತ್ಯಾಸವಿದೆ. 'ನನಗಂತೂ ಗಜ (ಗಣ್ಯಜನ) ಕ್ಕಿಂತಲೂ ಅಜ (ಅಲ್ಪಜನ)ದ ಮೇಲೆ ಸ್ಪೇಷನ್ ಪ್ರೀತಿ. ಇವರೆಲ್ಲ ಸ್ವಂತ ಗುಂಪು ಕಟ್ಟಿಕೊಂಡು ಮೆರೆಯುವ ಪಾಳೇಗಾರರೇನಲ್ಲ. ಗುಂಪಿನೊಳಗೆ ಗೋವಿಂದೆಂಬ ಅನಾಮಧೇಯರು'.

"ಲೇಖಕರು ಕೊಡುವ ಕೆಲವು ವ್ಯಕ್ತಿಗಳ ಬಗ್ಗೆ ಹೀಗೆ ಹೇಳುವರು. ಹಾಲು ಹಾಕುವ ತುಂಗವ್ವ, ಪೇಪರ ಹುಡುಗ ಕೃಷ್ಣ, ಸೈಕಲಂಗಡಿಯ ಶಮಶೋದ್ದಿನ್, ಕಾಯಪಲ್ಯೆ ಮಾರುವ ಮಾರುತಿ, ಟೇಲರ್ ವಸಂತ, ಡಬ್ಬಾ ಚಾದಂಗಡಿಯ ಕಲ್ಲೂ, ಆಫೀಸ್ ಬಾಯ್ ಸಿದ್ರಾಮ, ಬಸ್ಟ್ಯಾಂಡಿನಲ್ಲಿ ಹಮಾಲಿ ಕೆಲಸ ಮಾಡುವ ಹಾರೂನಸಾಬ್... ತನ್ನ ಏರಿಯಾದ ಎಲ್ಲ-ಎಲ್ಲರ ಹೆಸರು - ವಿಳಾಸ ಕಂಠ ಪಾಠ ಮಾಡಿದ್ದರೂ, ಅವರೆಲ್ಲರಿಗೂ ಇವತ್ತಿಗೂ ಅನಾಮಧೇಯನಾಗಿಯೇ ಉಳಿದುರುವ ಪೋಸ್ಟ್‌ಮನ್ ಗಂಗಯ್ಯ, ಮೀಟರ್ ರೀಡರ್ ಹಣ್ಮಂತ... ಇಂಥವರೆಲ್ಲ ನಮ್ಮ ಪ್ರಿಯ 'ಗುಂಗೋ'ಗಳೇ!."[೧೧]

ಸಿನಿಮಾ ನಟ-ನಟಿಯರ ಸಹನಟ-ನಟಿಯರು 'ಗುಂಗೋಗಳು' ಗುಟ್ಟಮೇಳ ವಾದಕರು ಕಾಂಪೋಜಿಟರಗಳು, ಶ್ರಮಿಕರು, ಚಮ್ಮಾರರು, ಮಾಣಿಗಳು, ದೊಡ್ಡ ಗುಂಗೋ'ಗಳ ಬಳಗವಿದೆ.

ಗಜಗಳು 'ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ರೀತಿಯಲ್ಲಿ ಜೀವಿಸಿದ್ದಾರೆ. ಆದರೆ 'ಗುಂಗೋ'ಗಳು ಮಾತ್ರ ಅತಿ ಸಿಂಪಲ್ (ಸೀದಾಸಾದಾ) ಬದುಕು. ಸಂತೆಯಲ್ಲಿ ಈತ ಸ್ಥಿತ ಪ್ರಜ್ಞನಾಗಿರುತ್ತಾನೆ. 'ಗುಂಗೋ', 'ಆಳಾಗಿ ದುಡಿದು, ಅರಸನಾಗಿ ಉಣ್ಣುವ ರೀತಿ ಗೊತ್ತು', ಪ್ರತಿಯೊಂದು ಕೆಲಸ-ಕಾರ್ಯ, ಮನರಂಜನೆ ಸಭೆ-ಸಮಾರಂಭ ಬಂದಾಗಲೂ ಆತ ಸ್ವತಂತ್ರ, ಸಂಸಾರದ ಸಾರ ಸವಿಯಲು ಬಲ್ಲವ ಅಂದರೆ ಸಂಸಾರದಲ್ಲಿ ಸೊನ್ನೆ ತೆಗೆದಾಗ ಸಸಾರ ಆಗುವಂತೆ ತನ್ನ ನಿಜಜೀವನದಲ್ಲಿ ಸುಖಿ ಪುರುಷ ಅವನೇ, ನಮ್ಮ ಗಂಗೋ ಆದರೆ ಗಂಡು ಗೋವಿಂದ ಎಂದರ್ಥ.

ಆತನು ದುಡಿದು ಹೆಂಡತಿ ಮಕ್ಕಳ ಜೊತೆಗೆ ಸಂಸಾರ ಸುಖವಾಗಿ ಮಾಡಿ, ಯಾವುದೇ ಚಿಂತೆಯಿಲ್ಲದೆ ಬದುಕಿ ನಂತರ ಸೂರ್ಯಸ್ತದಿಂದ ದಣಿವು ಕಳೆದು ಸೂರ್ಯೋದಯಕ್ಕೆ ಹೊಸ ಮನುಷ್ಯನಾಗಿ ಕಾರ್ಯನಿರ್ವಹಿಸುತ್ತಾನೆ.

ಇದ್ದುದರಲ್ಲಿಯೇ ಸಂತೋಷ ಕಾಣುವ ಸುಖಿಗಳು ಬದುಕಲು ತಿಳಿದವನು ಶ್ರೇಷ್ಠ ಬದುಕಿನಲ್ಲಿ ಸಂತೋಷವೇ ಮುಖ್ಯ. 'Small is always beautiful' ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು, ಎನ್ನುವಂತೆ 'ಗುಂಗೋ'ಗಳು ಪ್ರಸಿದ್ಧಿಪಡೆದಿದ್ದಾರೆ.

---

೧೧. 'ನಾಲಿಗೆಯ ಮೇಲೊಂದಿಷ್ಟು' : ಮಲ್ಲಿಕಾರ್ಜುನ ಹುಲಗಬಾಳಿ - ಪು.ಸಂ. - ೧೬

'ಕೈಯಲ್ಲೊಂದು ಪತ್ರಿಕೆ ಇದ್ದರೆ' : ಈ ಲೇಖಕರು ಊರಿಗೆ ಹೋದಾಗ ಕೈಯೊಂದು ಪತ್ರಿಕೆಕೊಂಡು ಓದಿ, ಅದನ್ನು ಸೀಟು ಹಿಡಿಯಲು, ಒಮ್ಮೊಮ್ಮೆ ಬಿಸಲಿಗೆ ಕೊಡೆ ರೂಪದಲ್ಲಿ ಹಿಡಿಯಲು, ದೊಡ್ಡವರ ಕಾರು ಸಿಡಿಸುವ ಕೊಳೆಗೆ ಅಡ್ಡ ಹಿಡಿಯಲು, ಆಗದವರು ಎದುರಿಗೆ ಬಂದಾಗ ಮರೆಗಾಗಿ ಈ ಪತ್ರಿಕೆ ಬಹುಉಪಯೋಗ ಆಗಿದೆ. 'ಬಸ್ಸಿನ ಸೀಟ ರಿಜರ್ವ ಮಾಡುವಾಗ ಪತ್ರಿಕೆಯ ಹೊಟ್ಟೆಯಲ್ಲಿನ ಹಾಳೆ ಮಾತ್ರ ನೀಡಿ'. 'ಬಂದ್ರೆ ಕುದುರೆ ಜುಟ್ಟು ಹೋದ್ರೆ ಕತ್ತೆ ಬಾಲ' ಎಂದು ನೀಡಿರುತ್ತೇನೆ ಎಂದು ತಮ್ಮ ಜಾಣತನ ವ್ಯಕ್ತಪಡಿಸಿರುವರು.

ಕೈಯಲ್ಲಿ ಪತ್ರಿಕೆ ಹಿಡಕೊಂಡು ಪ್ರಯಾಣಿಸುವಾಗ 'ಕೂಡ್ ಬರ್‍ರೀ ಸರ್‍ರ್... ಇಲ್ಲೆ ಹ್ಯಾಂಗಾದ್ರೂ ಅಡ್ಜಸ್ಟ್ ಮಾಡೂಣಂತ' ಮಹಾನುಭಾವನೊಬ್ಬ ಆಮಂತ್ರಿಸುತ್ತಾನೆ. ಇದು ಪೇಪರ ಮಹಿಮೆಯಲ್ಲದೇ ಮತ್ತೇನು!.[೧೨]

ಲೇಖಕರು ಓದುವುದರಿಂದ ಹಿಡಿದು ಹಾಸಿ ಮಲಗುವವರೆಗೆ ಪುಸ್ತಕ ಉಪಯೋಗ ಮಾಡುವ ರೀತಿ ವಿಶಿಷ್ಟವಾದುದು. 'ಕದ್ದು ನೋಡುವ ನನ್ನ ಕಣ್-ಚಪಲಕ್ಕೆ ಈಗಲೂ ಈತ ನೆರವಾಗುತ್ತಾನೆ'. 'ಮೂಡ್ ಬಂತೋ, ನಾಲ್ಕು ಸಾಲು ಅದರ ಮೈಮೇಲಿಯೋ ಬೀಚಿ, ತಲಬು ತೀರಿಸಿಕೊಳ್ಳುತ್ತೇನೆ'.

'ಕೈಯಲ್ಲೊಂದು ಪತ್ರಿಕೆ ಇದ್ದರೆ... ಓಹ್! ಆ ಸೊಬಗೇ ಬೇರೆ' ಈ ಲೇಖನ 'ಕಸ್ತೂರಿ' ಮಾಸಪತ್ರಿಕೆಯಲ್ಲಿ ಮೇ. ೨೦೦೩ ರಂದು ಪ್ರಕಟಣೆಗೊಂಡಿದೆ.

'ಮಂಗನ ಬಾಲ' : 'ನಾಲಿಗೆ ಮೇಲೊಂದಿಷ್ಟು' ಸಂಕಲನದ ಆರನೆಯ ಪ್ರಬಂಧವಾಗಿದೆ. ದುಡಿತಕ್ಕೆ ಕತ್ತೆ, ನಿಷ್ಠೆಗೆ ನಾಯಿ, ಕುತಂತ್ರಕ್ಕೆ ನರಿ ಇರುವಂತೆ, ಕುಚೇಷ್ಟೆಗೆಂದೇ ಹುಟ್ಟಿರುವ ಪ್ರಾಣಿ ಈ ಮಂಗ ಕಪಿಚೇಷ್ಟೆ, ಕೋತಿಬುದ್ಧಿ, ಮಂಗನಾಟ, ಮಂಗತನ ಮುಂತಾದ ವಿಶೇಷಣಗಳೆಲ್ಲ ನಮ್ಮ ಹುಂಡುತನ, ಹುಟುಗಾಟಕ್ಕೆ ಅನ್ವರ್ಥಕವಾಗುವಂಥವುಗಳೇ. ನಮ್ಮ 'ಬಾಲಲೀಲೆಗಳು' ಮಂಗನ ಚೇಷ್ಟೆಗೆ ಹೋಲುವಂಥವು.

ಮಂಗನ ಎಲ್ಲ ರೀತಿಯ ಚಟುವಟಿಕೆ ಬಗ್ಗೆ ತಿಳಿಸುತ್ತಾ, ತಮ್ಮ ಊರಿನಲ್ಲಿ 'ಗಿಡಮಂಗನ' ಆಟದ ನೆನಪುಗಳನ್ನು ಮೆಲುಕು ಹಾಕುವರು. ಮಂಗ ಸತ್ತಾಗ ಅದರ ಶವಸಂಸ್ಕಾರ ಮಾಡಿದ್ದು ಒಂದು ಘನಕಾರ್ಯವಾಗಿತ್ತು. ಒಂದು ಸರತಿ ಮಂಗನ ಬಾಲಿಗೆ ಪಟಾಕಿ ಕಟ್ಟಿ, ಅದನ್ನು ಕಷ್ಟಕ್ಕೆ ಇಡುಮಾಡಿದ ಪ್ರಸಂಗ ಈಗ ನೆನೆಸಿಕೊಂಡರೆ 'ಅಯ್ಯೋ ಪಾಪ' ಎನಿಸುತ್ತದೆ.

ಕನ್ನಡ ಪದಗಳ ಬಗ್ಗೆ ಈ ರೀತಿ ಪ್ರಸ್ತಾಪಿಸುತ್ತಾ – ಉದಾ : ನಮ್ಮ ಕನ್ನಡದ ಹುಡುಗಿ 'ಪಾರಿ'ಯನ್ನು ಹಿಂದಿಯಲ್ಲಿ 'ಪ್ಯಾರಿ'ಯನ್ನಾಗಿಸುವ ಈ ಮಂಗನ ಬಾಲ, ಕವಿಗಳ ಪಾಲಿಗೂ ಹಿರಿದಾದುದೆ..! ಅವರ 'ಕಾವ'ನ್ನು ಕಾವ್ಯವನ್ನಾಗಿಸುವ, 'ಹಾಸ'ನ್ನು 'ಹಾಸ್ಯ'ವನ್ನಾಗಿಸುವಲ್ಲಿ ಬಾಲದ ಕೈವಾಡ ಇರ್ಲೆಬೇಕು. ಅದೇ 'ವಂಗ'ನ್ನು 'ವ್ಯಂಗ್ಯ'ವಾಗಿಸಲು ಒಂದೇ ಸಾಲದು ಎರಡೆರಡು ಬಾಲಗಳು ಬೇಕಾಗುತ್ತದೆ.

---

೧೨. 'ನಾಲಿಗೆಯ ಮೇಲೊಂದಿಷ್ಟು' : ಮಲ್ಲಿಕಾರ್ಜುನ ಹುಲಗಬಾಳಿ – ಪು.ಸಂ. – ೧೬

ನಮ್ಮ ಬಾಲ್ಯಕ್ಕಂತೂ ಮಂಗನ ಬಾಲ ಬೇಕೇಬೇಕು. ಅದು ಅಲ್ಲದೇ, ಈ 'ಬಾಲ'ವೇ ಇಲ್ಲದೇ ಹೋದರೆ ಅಲ್ಲಿ 'ಬಾಲ್ಯ'ವಾದರೂ ಹೇಗೆ ಹುಟ್ಟಿಕೊಂಡಿತು? 'ಕರ್ಮವೀರ' ದೀಪಾವಳಿ ಸಂಚಿಕೆಯಲ್ಲಿ ೧೯೯೯ ರಲ್ಲಿ ಈ ಪ್ರಬಂಧ ಪ್ರಕಟಗೊಂಡಿದೆ.

**'ಹೊಟ್ಟೆ ಉರಿಸುವವರು'** : ಮತ್ತೊಬ್ಬರ ಏಳ್ಗೆಯನ್ನು ಕಂಡು ಮತ್ಸರ ಭಾವನೆಯನ್ನು ಉಂಟುಮಾಡುವ ಪ್ರವೃತ್ತಿ ಜನರು 'ಹೊಟ್ಟೆ ಉರಿಸುವ' ಜನರಾಗಿರುತ್ತಾರೆ.

ಹೊಟ್ಟೆಯುರಿ 'ಗಂಡು ಮಕ್ಕಳಿಗಿಂತ, ಹೆಣ್ಣು ಮಕ್ಕಳಲ್ಲಿ ಈ ಪ್ರವೃತ್ತಿ ಜಾಸ್ತಿ'. ಲೇಖಕರು ಕೊಂಡುಕೊಂಡ ಶರ್ಟ ಬಗ್ಗೆ ಅವರ ಗೆಳೆಯ ೨೫೦ ರೂ. ಬದಲಿ ೧೫೦ ರೂ. ಕೊಡಬೇಕಾಗಿತ್ತು. ಎಂದಾಗ ಹೊಟ್ಟೆಯುರಿ.

ಬಸ್ ಹೋದಾಗ ಲೇಖಕರ ಮನಸ್ಸಿನಲ್ಲಿ ಹಲವಾರು ವಿಚಾರಗಳು ಬಂದು ಹೋಗುತ್ತವೆ. ಅಧಿಕಾರಿಯ ಕೋಪಕ್ಕೆ ಗುರಿಯಾಗುವುದು. 'ಎಲೆ ಬದಲು ನನ್ನ ಉದರಕ್ಕ ಸುಣ್ಣ ಹಚ್ಚುವಂತಿದೆ' ಎಂದು ಲೇಖಕರು ಅಂದುಕೊಳ್ಳುವರು.

ಬೇರೆಯವರ ಉನ್ನತಿ ಕಂಡು ಹೊಟ್ಟೆಕಿಚ್ಚು ಪಡಬಾರದು. ಕಣವಿಯವರ ಮಾತುಗಳು ಇಂತಿವೆ 'ಕಂಡ ಕಣ್ಣಿಗೆ ತಂಪು, ಎದೆಗೆ ಕುಂದದ ಲಂಪು' ಉದರದುರಿತದಿಂದ ಬಳಲುವವರಿಗೆ ಔಷದಿಗಳಂತಿವೆ. ಬೇರೆಯವರನ್ನು ಕಂಡು ನಾವು ಅದರಂತೆ ಉನ್ನತಿ ಏರಲು ಪ್ರಯತ್ನಸಬೇಕು ಹೊರತು, ಮತ್ಸರಭಾವನೆ ತ್ಯಜಿಸಬೇಕು. 'ಅವರ ಸುಖ ನನ್ನ ಸುಖ, ಅವರ ದುಃಖ ನನ್ನ ದುಃಖ' ಎನ್ನುವ ವಿಶಾಲಭಾವನೆ ಬೆಳೆಸಿಕೊಳ್ಳಬೇಕು. ಹೊಟ್ಟೆಯುರಿಯನ್ನು ಯಾವ ಸಂದರ್ಭದಲ್ಲಿ ಶಮನ ಮಾಡಬಹುದು ಎಂಬುದನ್ನು ಲೇಖಕರು 'ಕಟ್ಟಿಕೊಂಡ ಹೆಂಡತಿಯನ್ನು ಹೇಗೆ ಬಿಡಲು ಸಾಧ್ಯವಿಲ್ಲ ಹಾಗೆ' ಈ ಹೊಟ್ಟೆಯುರಿ. ಈ ಪ್ರಬಂಧ 'ಸುಧಾ' ವಾರ ಪತ್ರಿಕೆಯಲ್ಲಿ ಸೆಪ್ಟೆಂಬರ ೨೪, ೨೦೦೦ ರಂದು ಪ್ರಕಟಗೊಂಡಿದೆ.

**'ಮೂರು... ಮತ್ತೊಂದು'** : 'ಮಾತು ಬಲ್ಲಾತ ಮೂಜಗವನ್ನು ಗೆಲ್ಲಬಲ್ಲ'. ಮಾತು ಅರ್ಥಗರ್ಭಿತ ಘಟ್ಟಿಯಾದ, ಸತ್ವದಿಂದ ಕೂಡಿರಬೇಕು. ಮಾತಿನ ಮರ್ಮ ಅರಿತವ ಜಾಣ. ಮಾತು ಬಲ್ಲವ ಮಾಣಿಕ್ಯ ತಂದ, ಮಾತ ಅರಿಯದಾತ ಜಗಳ ತಂದ ಮಾತೆಂಬುದು ಜ್ಯೋತಿರ್ಲಿಂಗ.

ಉದಾ : ನಿಮಗೆ ಮಕ್ಕಳೆಷ್ಟು ಸ್ವಾಮಿ? ಎಂದು ಕೇಳಿದರೆ 'ಇವೆ... ಅವೆರಡು... ಇವೆರಡು' ಎಂಬ ನನ್ನ ಮಾಯಾ ಮಾತುಗಳಲ್ಲಿ ನನಗೆ ನಾಲ್ಕು ಮಕ್ಕಳು' ಎಂಬ ಸತ್ಯವಡಗಿರುತ್ತದೆ.

'ಎಷ್ಟು ವಿಷಯದಲ್ಲಿ ಫೇಲಾದೆಯೋ?' ಎಂದು ನನ್ನ ಮಗನನ್ನು ಕೇಳಿದಾಗ 'ಒಂದ್ ಬಿಟ್ಟು ಎಲ್ಲ ವಿಷಯಗಳು ಎಂದುತ್ತರಿಸಬೇಕೆ? ಇರುವ ಆರು ವಿಷಯಗಳಲ್ಲಿ ಐದರಲ್ಲಿ ಫೇಲಾಗಿದ್ದೇನೆ' ಎಂದು ನೇರವಾಗಿ ಉತ್ತರಿಸುವಲ್ಲಿ ಆತನ ಸ್ವಾಭಿಮಾನ ಅಡ್ಡ ಬರುತ್ತದೆ.

ನನ್ನಗೆಳೆಯ 'ನಾನು ಹೇಗೆ ಕಾಣಿಸ್ತೀನ್ರೀ?' ತನ್ನ ಮೈ ಕಪ್ಪನ್ನೆಲ್ಲ ಮೇಕಪ್ಪಿನಲ್ಲಿ ಮುಚ್ಚಿಟ್ಟುಕೊಂಡವನು. 'ಫಸ್ಟಕ್ಲಾಸ್... ಫಸ್ಟಕ್ಲಾಸ್ ಎಪ್ಪತ್ತೈದು ಪರ್ಸೆಂಟ್ ಸುಂದರವಾಗಿರುವೆ' ಎಂದೆ.

ಈ ಪ್ರಬಂಧ ಸಂಕಲನದ ಕೊನೆಯ ಹಾಸ್ಯ ಪ್ರಬಂಧ 'ನಾಲಿಗೆಯ ಮೇಲೊಂದಿಷ್ಟು' ಲೇಖಕರ 'ವಿಶ್ವ', 'ಹೆಣ್ಣು ನಾಲಿಗೆಯಾದರೆ... ಗಂಡು ಯಾರು'? ಕುಹಕ ಪ್ರಶ್ನೆ ಮುಂದಿಟ್ಟು, ನಾಲಿಗೆ-ಕರ್ಣ ಬಗ್ಗೆ ಲೇಖಕರು ಈ ರೀತಿ ಹೇಳುತ್ತಾ, 'ಶರಣಸತಿ, ಲಿಂಗಪತಿ' ಅನುಭವ ಮಾತು. 'ಕರ್ಣ ಪತಿ, ಜಿಹ್ವಾ ಸತಿ' ಅಂಬೋದು ಅನುಭವದ ಮಾತು. 'ಸ್ವಂಟ್ ಸತಿಗೆ, ಸೈಲೆಂಟ್ ಪತಿ ಇದ್ದಾಗಲೇ ಅನ್ಯೋನ್ಯ ದಾಂಪತ್ಯ ಸಿದ್ಧಿಯಾಗುತ್ತದೆ'. ಅಂದರೆ 'ಕಿವುಡ ಹೆಂಡತಿ, ಏಬಡ ಗಂಡ' ಇವರ ದಾಂಪತ್ಯ ನಿರಾಂತಕವಾಗಿ ಸಾಗುತ್ತದೆ.

ನಾಲಿಗೆಯನ್ನು ಕಟ್ಟಳೆಯಲ್ಲಿ ಇಡಲಾಗದು. ನಾಲಿಗೆ ಒಳ್ಳೆಯದಾದರೆ ನಾಡೆಲ್ಲ ಒಳ್ಳೆಯದು, ನಾಲಿಗೆ ತನ್ನ ಕುಲವನ್ನು ಹೇಳಿತು. ಒಟ್ಟಿನಲ್ಲಿ ಉಕ್ತಿ-ಲೋಕೋಕ್ತಿ; ನಿಂದಾ-ಸ್ತುತಿಗಳಿಗೆ, ಶಾಸ್ತ್ರ-ಸೂತ್ರಗಳಿಗೆ; ವಾಚ್ಯ-ಅವಾಚ್ಯ; ಶೀಲ-ಅಶ್ಲೀಲ; ಸಹ್ಯ-ಅಸಹ್ಯ - ಅದೇನೇ ಇರಲಿ, ಅದಕ್ಕೊಂದು 'ಮೋಕ್ಷ' ಸಿಗೋದು ಈ ಜಿಹ್ವೆಯಿಂದಲೆ!

ಕರ್ಣ-ಸ್ಥಿರ ಹಾಗೂ ಗಂಭೀರ ಸ್ವಭಾವದ 'ಗಂಡಸು' ನಾಲಿಗೆ ಸ್ತ್ರೀಯಿದ್ದಂತೆ. ನಾಲಿಗೆ ಹುಡುಗರಿಂದ ಮುದುಕರವರೆಗೆ ಗುಮಾಸ್ತನಿಂದ-ಅಧಿಕಾರಿವರೆಗೆ, ಅಜ್ಞಾನಿಯಿಂದ-ಜ್ಞಾನಿವರೆಗೆ ತನ್ನ ಸೇವೆಯನ್ನು ಪ್ರಾಮಾಣಿಕವಾಗಿ ಮಾಡುವ ಗುಣವಿದೆ.

ನಮ್ಮ ವಾಚಕ-ವಾಚಕಗಳ ಅಡುದ್ದ, ಆಳ-ಎತ್ತರಗಳ ಮೌಲ್ಯಮಾಪಿಸುವ ಛಾತಿ ಇವಳದು!. 'ಊಟದ ರುಚಿಯನು ನಾಲಿಗೆಯಲ್ಲದೆ ಕಲಿಸುವ ಕೈ ತಾನೆತ್ತ ಬಲ್ಲುದೋ...?' ಎಂಬ ಮಾತು ನಿದರ್ಶನವಾಗಿದೆ. ಹಲ್ಲು-ನಾಲಿಗೆ ಜಗಳವನ್ನು ಇಲ್ಲಿ ಪ್ರಸ್ತಾಪಿಸಬಹುದು.

ಕಾಳಿದಾಸನ ಓಂಕಾರ, ಡಾಕ್ಟರ ರೋಗಿ ಪರೀಕ್ಷೆ ಮುಂಚೆ ಇದರ ಪರೀಕ್ಷೆ, ಕವಿಗಳು ಇದರ ದರ್ಶನ ಮೊದಲು ಪಡೆಯುವರು. ಪಂಚೇಂದ್ರಿಗಳಲ್ಲಿಯೇ 'ಸಂವೇದಾನ ಶಿಲೆ' ಈಕೆ. ಪ್ರಜಾಪ್ರಭುತ್ವ, 'ಅಭಿವ್ಯಕ್ತಿ ಸ್ವಾತಂತ್ರ್ಯ' ಇದರಿಂದಲೇ ಉಳಿದುಕೊಂಡಿದೆ.

ಮಾತಿನಿಂದ ಎಲ್ಲರನ್ನು ಮರಳು ಮಾಡಬಹುದು. ಹೋಗಿ ಹೋಗಿ ಅವರ ಕೂಡ ಮಾತೇನು? ಹೊಲಸು ನಾಲಿಗೆಯ ಕೂಡ ಅದೆಂಥ ಹಾಸುಹೊಕ್ಕು! ದೂರ ಇದ್ದಷ್ಟು ಗಂಡಾಂತರ ಕಮ್ಮಿ.

ಶುಕ್ರಾಚಾರ್ಯ ಮಗಳು ದೇವಯಾನಿಗೆ ಶರ್ಮಿಷ್ಠೆಯ ಮಾತಿನಿಂದ ಅದೆಷ್ಟು ಘೋರ ಕಷ್ಟ ಬಂತಲ್ಲ. 'ನಾಲಿಗೆಯಂಥ ವಿಷಕಾರಿ ನಂಜು-ಅಸ್ತ್ರದಿಂದ ಉಂಟಾಗುವ ಹೃದಯ-ಗಾಯಗಳಿಗೆ ಇನ್ನೂ ಔಷಧಿ ಕಂಡು ಹಿಡಿಯಲಾಗಿಲ್ಲ'.

Sugar - coat ಮಾಡುವ Soft tongue ನಮಗಿದ್ದರೆ... ನಾವೆಲ್ಲ Safe ಆಗಿರಬಹುದಲ್ಲ. ನಾಲಿಗೆಯನ್ನು ಗೆದ್ದಾತ ಎಲ್ಲವನ್ನು ಗೆಲ್ಲತ್ತಾನೆ. ನುಡಿದಂತೆ ನಡೆ ಇದೆ ಜನ್ಮ ಕಡೆ. 'ಈ ಮಾತಿನ ಮಲ್ಲಿಯ ಬಗ್ಗೆ ಎಷ್ಟು ಬ(ಕೋ)ರೆದರೂ ಕಮ್ಮಿಯೇ' ಈ ಪ್ರಬಂಧ ೨೦೦೩ ಆಗಸ್ಟ್ ೨೬ ರಂದು ಪ್ರಕಟಗೊಂಡಿದೆ.

ನಾಲಿಗೆಯ ಮೇಲೊಂದಿಷ್ಟು ಪ್ರಬಂಧ ಸಂಕಲನ ನಮ್ಮ ದಿನನಿತ್ಯ ವ್ಯವಹಾರ ಚತುರತೆಯನ್ನು ನಮ್ಮಲ್ಲಿ ಮೂಡಿಸುತ್ತದೆ. ಜೊತೆಗೆ ಹಾಸ್ಯರಸವು ಹೊನಲಾಗಿ, ಹೊಳೆಯಾಗಿ, ಕಡಲಾಗಿ ಹರಿದಿದೆ.

ಅದರ ಸೀಮಿತ ಇಷ್ಟೇ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ.

ಲೇಖಕರ ಈ ಪ್ರಬಂಧಗಳು ಓದುಗರನ್ನು ಓದಿಸಿಕೊಂಡು ಹೋಗುತ್ತವೆ. ಅದರ ಜೊತೆಗೆ ದಿನನಿತ್ಯದ ವ್ಯವಹಾರ ಕಲಿಸಿಕೊಡುತ್ತವೆ. ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಪ್ರಜ್ಞೆ ಅಲ್ಲಿ ಅಡಗಿದೆ.

* * *

**ಅನುಕೂಲಕ್ಕೊಂದು ಅವತಾರ :**

ಭವನೇಶ್ವರಿ ಹೆಗಡೆ ತಮ್ಮ ಮುನ್ನುಡಿಯಲ್ಲಿ 'ಜಗತ್ತಿನಲ್ಲಿರುವ ಎಲ್ಲ ಅಧಿಕ ಪ್ರಸಂಗಿಗಳೂ ಹಾಸ್ಯ ಸಾಹಿತಿಗೆ 'ಬೇಕಾದವರು', ಹಾಸ್ಯ ಲೇಖಕರು ಅಧಿಕ ಪ್ರಸಂಗಿಗಳನ್ನು ಕಂಡು ಕ್ಷುದ್ರರಾಗುವದಿಲ್ಲ. ತುಟಿಯರಳಿಸುತ್ತಾರೆ'. ಅಹಂಕಾರಕ್ಕೆ, ಸಿಟ್ಟಿಗೆ, ರೋಷಕ್ಕೆ ಪ್ರತ್ಯಕ್ಷವಾಗಬಲ್ಲ ನಗು ಇಂದಿನ ದಿನಗಳಲ್ಲಿ ಎಲ್ಲ ಕಡೆಯೂ ಒದಗಿಬರಬಹುದಾದ 'ಅಹಿಂಸಾತ್ಮಕ ಅಸ್ತ್ರ'. ಈ ರೀತಿ ಅಭಿಪ್ರಾಯ (ಅನಿಸಿಕೆ) ವ್ಯಕ್ತಪಡಿಸಿದ್ದಾರೆ.

ಒಟ್ಟು ೨೪ ಹಗುರ ಬರೆಹಗಳಿಂದ ಕೂಡಿದ ಹಾಸ್ಯಸಂಕಲನ, ಆದರೆ 'ಸಂಚಾರಿ ಸಖಿಗೊಂದು ಪ್ರೇಮಾಪತ್ರ', 'ಕಾಮ್', 'ಆತುರಾಣಾಮ್' ಎಂಬ ಎರಡು ಹಾಸ್ಯ ಪ್ರಬಂಧಗಳು ಪುನಃ ಬಂದಿರುವುದು ನನ್ನ ಗಮನಕ್ಕೆ ಬಂದಿದೆ.

'ಪೆನ್ಸನ್-ಟೆನ್ಸನ್'ನಿಂದ ಪ್ರಾರಂಭವಾಗಿ 'ಸುಡುಗಾಡು ಹಾಸ್ಯ' ಪ್ರಬಂಧದಲ್ಲಿ ಮುಕ್ತಾಯ. ಈ ಪುಸ್ತಕದ ಬೆನ್ನುಡಿ ಬರೆದ ಸಿದ್ಧರಾಜ ಪೂಜಾರಿ ಅವರ ಅನಿಸಿಕೆ ಇಂತಿದೆ – 'ಓದುಗರ ಮನಸ್ಸನ್ನು ಉಮೇದುಗೊಳಿಸುವ ಇಪ್ಪತ್ನಾಲ್ಕು ಬರಹಗಳು ಸಂಕಲಿತವಾಗಿದೆ. ಹಾಸ್ಯದ ಘಟಸ್ಥಲಗಳ ಕೊನೆಯ ಮೆಟ್ಟಿಲು ಏರಿದರೇನೊ ಎನ್ನುವ ಹಾಗೆ 'ಅವರೀಗ ನಾಡಿನ ಪ್ರಸಿದ್ಧ ವಿನೋದ ಸಾಹಿತಿಗಳಲ್ಲಿ ಒಬ್ಬರಾಗಿ ಬೆಳೆದಿದ್ದಾರೆ.



ಹುಲಗಬಾಳಿಯವರ 'ಹಾಸ್ಯದ ಸಹಜ ಸಿದ್ಧಿಗೆ' ಅವರ ಬರಹಗಳೇ ಮಾದರಿಯಾಗಿವೆ. ಹುಲಗಬಾಳಿಯವರ 'ಅನುಕೂಲಕ್ಕೊಂದು ಅವತಾರ' ಬರಹಗಳು 'ನಗೆ ಬೆಳದಿಂಗಳಿನಲ್ಲಿ ಒಂದು ವಾಕ್ ಹೋಗಿ ಬಂದ ಹಾಗೆ'.[೧೩]

ಇಲ್ಲಿಯ ಎಲ್ಲ ಹಾಸ್ಯ ಲೇಖನಗಳ ಮೂಲಧಾತು ಜೀವನೋತ್ಸಾಹವಾಗಿದ್ದು. ಪ್ರತಿಪಾತ್ರ, ಸನ್ನಿವೇಶಗಳೂ ಲವಲವಿಕೆಯ ಚಿಲುಮೆಗಳಾಗಿವೆ. ಲೇಖಕರ ಹಾಸ್ಯ ಪಾತ್ರಧಾರಿಗಳಾದ 'ಸರಸು', 'ವಿಠ್ಠೂ'-ವಿಠ್ಠೂ ಒಮ್ಮೆ ಹೆಂಡತಿ ತಮ್ಮನಾಗಿ, ಶಿಷ್ಯನಾಗಿ ತನ್ನ ಪಾತ್ರ ನಿರ್ವಹಿಸುವನು. 'ಸರಸು' ಲೇಖಕರ ಹೆಂಡತಿಯೆಂದು ಪ್ರಾರಂಭದ ಎರಡು ಪ್ರಬಂಧ ಸಂಕಲನದಲ್ಲಿ ಕಂಡುಕೊಂಡರೆ, ಐದನೆಯ ಪ್ರಬಂಧದಲ್ಲಿ 'ಸನ್‌ಮಾನ' ಹಾಸ್ಯ ಪ್ರಬಂಧದದಲ್ಲಿ ವಿಠ್ಠೂನ ಹೆಂಡತಿ ಸರಸು ಆಗಿದ್ದಾಳೆ. ಅವರ ಹಾಸ್ಯ ಲೇಖನದಲ್ಲಿ ಬಳಸಿಕೊಂಡ ವರ್ಣನೆಗಳು ನುಡಿಚಿತ್ರಗಳಾಗಿ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ.

ಸಂಚಾರಿ ಸಖಿಗೊಂದು ಪ್ರೇಮಪತ್ರ – ಪ್ರಬಂಧದಲ್ಲಿ 'ಡಬಲ್ ಡೆಕ್ಕರನ್ನ ನೋಡಿದ್ರ ನಮ್ಮೂರ ಹಿರೇಗೌಡ್ತೀಯ ಚಿತ್ರ ಕಣ್ಮುಂದೆ ಬರ್‍ತದ. ಕಚ್ಚಿ ಹಾಕಿದ ಇಳಕಲ್ಲ ಒಂಭತ್ತು ವಾರದ ಧಡೂತಿ ಸೀರೆ ಉಟ್ಟು ಧುಸುಮುಸು ಉಸಿರು ಹಾಕ್ಕೊಂತ ಹೆಂಡಿಗಸಾ ಮಾಡುವ ಪರ್ವತ ಕಾಯದ ಆ ಪಾರ್ವತೆವ್ವ ಗೌಡ್ತೀನ ನೋಡಿಯೇ ಈ ಡೆಕ್ಕರವ್ವನ ತಯಾರಿಸಿರಬಹುದೇನೋ...' ಎಂಬಂತೆ ವರ್ಣನೆಗಳು ಉದ್ದಕ್ಕೂ ಸಿಕ್ಕು ತುಟಿಯರಳಿಸುತ್ತವೆ.[೧೪]

---

೧೩. 'ಅನುಕೂಲಕ್ಕೊಂದು ಅವತಾರ' – ಮಲ್ಲಿಕಾರ್ಜುನ ಹುಲಗಬಾಳಿ (ಮುನ್ನುಡಿ – VI)

೧೪. ಅದೇ (ಸಂಚಾರಿಸಖಿಗೊಂದು ಪ್ರೇಮಪತ್ರ) – ಮಲ್ಲಿಕಾರ್ಜುನ ಹುಲಗಬಾಳಿ – ಪುಟ ೩.

'ಅಂಗ್ರೇಜಿ ಭೂತವೂ ವಿಕ್ರಮನ ಬೇತಾಳವೂ' ಅವರ ವಿಡಂಬನೆ ಶೈಲಿಗೆ ಹಿಡಿದ ಕನ್ನಡಿಯಾಗಿದೆ. ಪ್ರಮಾಣವಚನ ಸ್ವೀಕರಿಸುವ ಮುಂಚೆಯೇ ಸರ್ಕಾರ ಬಿದ್ದು ಹೋದಂತೆ ಪಠ್ಯಪುಸ್ತಕಗಳೆಲ್ಲ ಕೈಗೆ ಸೇರುವಷ್ಟರಲ್ಲಿ ವಾರ್ಷಿಕ ಪರೀಕ್ಷೆಗಳೇ ಮುಗಿದು ಹೋಗಿದ್ದವು. ಇದರಿಂದಾಗಿ ಅಂಥ ಪ್ರಳಯವೇನೂ ಆಗಲಿಲ್ಲಬಿಡು. ಯಾಕೆಂದ್ರೆ ಆ ಹುಡುಗ ಫಸ್ಟ್ ಕ್ಲಾಸಿನಲ್ಲಿ ಪಾಸಾಗಿದ್ದ.

ಅರಳುತ್ತಿರುವ ಉದಯೋನ್ಮುಖ ಕವಿಗಳು (ಸಾಹುಕಾರ ಸಾಹಿತಿ), ಉಲ್ಕಾಪಾತ–ಉಳ್ಕಾಪಾತ (ಉಲ್ಕಾಪಾತ), ಪಕ್ಷಾಂತರ ಎಂಬಂತೆ ಕಾಳಾಂತರ (ರಾಗಿ ರಾಜಕಾರಣ) ವೃಶ್ಚಿಕ ರಾಶಿಯ ಹೆಡ್‌ಮಿಸ್ಟ್ರಗಳಂಥ ಪದಮುಂಜಗಳು ನಗೆಯುಕ್ಕಿಸುತ್ತವೆ.

ಹಾಗೆಯೇ ಅತಿ ಸಹಜವಾಗಿ ಮೂಡಿ ಬಂದಿರುವ ಕೆಲವು ಭಾಷಾ ಪ್ರಯೋಗಗಳು ಸಂಕಲನದ ಸ್ವಾರಸ್ಯವನ್ನು ಲೇಖಕರ 'ಪದ ವಿನೋದ ಪ್ರೀತಿ'ಯನ್ನು ತೆರೆನೀಡುತ್ತವೆ.

'ರಿನ್ಯೂವಲ್ಲಾಗಿದ್ದ ಬಿ.ಟಿಯನ್ನು, ರೀ ನೀವಲಾ!' ಎಂದು ಕೇಳುವದು, ಸ್ವಕೃಪಾಪೋಷಿತ ನಾಟಕ ಕಂಪನಿಗಳು (ಅನುಕೂಲಕ್ಕೊಂದು ಅವತಾರ).

**'ಮತ್ತೇ ಇಲೇಕ್ಷನ್ನಂದ್ರೆ'** : ಇಂದಿನ ರಾಜಕಾರಣಿಗಳ ಮನೋಧರ್ಮ, ಜನರು ರಾಜಕಾರಣಿಗಳ ಬಗ್ಗೆ ಹೊಂದಿದ ಬಿನ್ನಾಭಿಪ್ರಾಯ. ದಡ್ಡ ಇದ್ದವನು ಮಾತ್ರ ರಾಜಕಾರಣಿಯಾಗಿ ರಾಜಕೀಯ ಕಾರ್ಯಬಾರ ಮಾಡಬಹುದು. ಎಲೆಕ್ಷನ್ ಎಂದರೆ ಕೇವಲ ಹಣ ಮಾಡುವ ಉದ್ಯೋಗ ಎನ್ನುವಷ್ಟರ ಮಟ್ಟಿಗೆ ಕೀಳಾಭಿಪ್ರಾಯ ಹೊಂದಿದ್ದಾರೆ.

'ಇಂಗ್ಲೀಷನ 'ಇಲೆಕ್ಷನ್', 'ಕಲೆಕ್ಷನ್' ಎಂಬುದಾಗಿದೆ. ಮೇಜ ಮೇಲಿಂದ ತಿಂದ ಮೇಜವಾನಿ ಇಂಗ್ಲೀಷನಲ್ಲ ಲಂಚವಾದರೆ ಅದೇ ಮೇಜಿನ ಕೆಳಗಿನಿಂದ ಬಂದಿದ್ದು ಕನ್ನಡದ ಲಂಚವಾಗುತ್ತದೆ'. (ಲಂಚಿಂಗ್–ಪಂಚಿಂಗ್), ಫಿಫ್ಟಿ ಫಿಫ್ಟಿ ಪಾಲುಗಾರಿಕೆಯಲ್ಲಿ ಬಾಳಿದರೆ ಸರ್ಕಾರಿ ಸುಖ (ರಂಗಾ ನಿನಗೂ ಆಣೆ).[೧೫]

**'ಸಾಹೇಬರ ಸಾಹಿತ್ಯ'** : ಈ ಪ್ರಬಂಧದಲ್ಲಿ ತನಗಿಂತ ಕೆಳಗಿದ್ದ ಒಬ್ಬ ಗುಮಾಸ್ತನ ಕೃತಿ ಬಗ್ಗೆ. ಅಧಿಕಾರಿ ಸಾಹಿತಿಯ ಮತ್ಸರ ಮನೋಭಾವ ಕಂಡು ಬರುವುದು. ತನ್ನ ಮೇಲ ಅಧಿಕಾರಿ ಕವಿಯಾಗಿದ್ದರೆ, ಅಹಂಭಾವ, ಅವಾಂತರ ಕುರಿತ ವಿಠ್ಠಲ ಪಾತ್ರದ ಮೂಲಕ ಸಮಾಜದಲ್ಲಿಯ ತಪ್ಪನ್ನು ತಿದ್ದಿಕೊಳ್ಳಲಿಕ್ಕೆ ಸಾಧ್ಯವಾಗುವುದು.

ಶಿಕ್ಷಣ ಸಾಕಷ್ಟು ಪಡೆದರೂ ಕೂಡ ಸಾಮಾನ್ಯ ಜ್ಞಾನ ನಮಗೆ ಅವಶ್ಯ. ಅಂದರೆ ಮಾವಿನ ಹಣ್ಣನ್ನು ಕೊಂಡುಕೊಂಡ ಬಂದ ಪ್ರಸಂಗ 'ಅತಿಆಸೆ ಗತಿಗೇಡಿಸಿತು' ಎಂಬಂತೆ ಅಧಿಕಾರಿ ತನ್ನ ಕೈಕೆಳಗಿನ ಗುಮಾಸ್ತನನ್ನು ಎಲ್ಲ ರೀತಿ ಖರ್ಚು ಮಾಡಿಸಿ ಕೊನೆಗೆ ಪ್ರಮೋಷನ್ ಆರ್ಡರ ಅಪರಾತಪರಾ ಆದದ್ದನ್ನು ಬಹು ಸ್ವಾರಸ್ಯಕರವಾಗಿ ಲೇಖಕರು ಚಿತ್ರಿಸಿದ್ದಾರೆ. ಸದ್ಯ ದಿನನಿತ್ಯ ನಡೆಯುವ ಘಟನೆಗಳಿಗೆ

---

೧೫. ಲಂಚಿಂಗ್–ಪಂಚಿಂಗ್ – ಮಲ್ಲಿಕಾರ್ಜುನ ಹುಲಗಬಾಳಿಯವರ – ಪುಟ ೮೨, ೮೫
(ಅನುಕೂಲಕ್ಕೊಂದು ಅವತಾರ)

ಇದು ಕೈಗನ್ನಡಿಯಂತೆ ಇದೆ. ಇದರಿಂದ ಅಧಿಕಾರಿಗಳಿಂದ ತನ್ನ ಕಿರಿಯ ನೌಕರನನ್ನು ಶೋಷಿಸುವ ರೀತಿ ವ್ಯಕ್ತವಾಗಿದೆ.

**ಸಾಹುಕಾರ ಸಾಹಿತಿ** : 'ದುಡ್ಡ ಇದ್ದರೆ ಜಗತ್ತನ್ನು ಗೆಲ್ಲಬಹುದು' ಎಂಬುದನ್ನು ಲೇಖಕರು 'ಸಾಹುಕಾರ ಸಾಹಿತಿ' ಪಡೆದುಕೊಳ್ಳುವ ಪುರಸ್ಕಾರ, ಸತ್ಕಾರ, ಹಣ ದೊರಕಿದ್ದು ವಿಚಿತ್ರ. ಅಲ್ಪರು, ಅಜ್ಞಾನಿಗಳು ಸಮಾಜದಲ್ಲಿ ಸ್ಥಾನಪಡೆಯಲು ಅವರಿಗೆ ರಾಜಕೀಯ ಮುಧಾರಿಗಳ ಹಾಗೂ ಉನ್ನತ ಅಧಿಕಾರಿಗಳ ಬೆಂಬಲದಿಂದ ಶ್ರೇಷ್ಠಮಟ್ಟಕ್ಕೆ ಸಾಗುತ್ತಾರೆ.

ಇಲ್ಲಿ ಡಾ॥ ಗಿರಡ್ಡಿ ಗೋವಿಂದರಾಜರ 'ಪ್ರಶಸ್ತಿ ಎಂಬ ಪುರಸ್ಕಾರ' ಪ್ರಬಂಧ ದುಡ್ಡು, ರಾಜಕೀಯ ಬೆಂಬಲದಿಂದ ದೊಡ್ಡ ಸಾಹಿತಿಗಿಂತ ಮೊದಲು ಚಿಕ್ಕ ಸಾಹಿತಿ ಪ್ರಶಸ್ತಿ ಪುರಸ್ಕಾರ ಪಡೆಯಬಹುದು.

**'ಸನ್–ಮಾನ'** : ಈ ಪ್ರಬಂಧ ಶೀರ್ಷಿಕೆಯಲ್ಲಿಯೇ ನಮಗೆ ಹಾಸ್ಯ ಎದ್ದು ಕಾಣುವುದು. ಸಾಹಿತಿಯೊಬ್ಬರನ್ನು ಸನ್–ಮಾನ ಮಾಡಲಿಕ್ಕೆ ಕರೆದು, ಅವರ ಮಾನ ಕಳೆದ ಪ್ರಸಂಗವಿದು, ಅತಿಥಿಗಳಿಗೆ ತೋರಣ ಕಟ್ಟಲು, ಕುರ್ಚಿ ಹಾಕಲು ಹೇಳಿ ಅವರನ್ನು ಅಸಹ್ಯ ಮಾಡಿದ್ದು ಅಲ್ಲದೇ ರಾಜಕಾರಣಿಗಳ ಭರಾಟೆಯಲ್ಲಿ ಅತಿಥಿಯನ್ನು ಮರೆತ ಪ್ರಸಂಗ ಬಹಳ ವಿಷಾದನೀಯ.

**'ಸಮ್ಮಿಶ್ರ ಸಂಸಾರ' – ೨೫** : ಸಮ್ಮಿಶ್ರ ಸರ್ಕಾರದಂತೆ ಇವರು ಕೂಡ ಮನೆಯ ರಾಜಕೀಯವನ್ನು ಮನಸ್ಸಿಗೆ ಬಂದಂತೆ ನಡೆಸುವರು.

**'ನೀರ್... ನೀರೆ... ನೀರಾ...!'** : ಮಳೆ ಆಗದೆ ಇದ್ದಾಗ ಬರ ಬರವುದು ಖಂಡಿತ. ಆಂದ್ರ – ಮಹಾರಾಷ್ಟ್ರ – ಕರ್ನಾಟಕ ಈ ಮೂರು ರಾಜ್ಯಗಳು ನೀರಿಗಾಗಿ ಪರದಾಡು ಹಾಗೂ ತಂಟೆ–ತಕರಾರುಗಳಿಂದ ಕೋರ್ಟ ಹತ್ತಿದ ಪ್ರಸಂಗವನ್ನು ಹಾಸ್ಯ ಶೈಲಿಯಲ್ಲಿ ಲೇಖಕರು ವ್ಯಕ್ತಪಡಿಸಿರುವರು.

**'ಅಪ್ಪು ಪಾಸ್ ಹೋಗಯಾ...!'** : ಪರೀಕ್ಷೆ ಪಾಸಾಗಲು ಹರಸಾಹಸ ಮಾಡಿದ ಪರಿಯನ್ನು ಲೇಖಕರು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ.

**'ಸುಡುಗಾಡು ಹಾಸ್ಯ'** : ಈ ಹಾಸ್ಯ ಪ್ರಬಂಧ ಸಂಕಲನದ ಕೊನೆಯ 'ಪ್ರಬಂಧ' ಏನು ಕೇಳಿದರೂ ಸುಡುಗಾಡು ಹಾಸ್ಯ ಎಂದು ಪ್ರಸ್ತಾಪಿಸುವ ವಿಶ್ವನ ಪಾತ್ರ ಚಿತ್ರಣ ಸ್ವಾರಸ್ಯದಿಂದ ಕೂಡಿದೆ.

'ಹೆಣದವರು ಸತ್ತವನಿಗಾಗಿ ಅಳುತ್ತಿದ್ದರೆ, ಹಲಿಗೆಯುವ ತನ್ನ ಮಜೂರಿಗಾಗಿ ಹಳಹಳಿಸುತ್ತಿದ್ದರಂತೆ' ಆದರೆ ವಿಶ್ವನ ಹಾಸ್ಯ ಕೇಳಲು ಅಲ್ಲಿ 'ತಟಸ್ಥರು' ಸುತ್ತುವರೆದಿದ್ದರು.

'ಈ ಸುಡಗಾಡದವನ ಕೂಡ ಇದ್ದಾವ್ರಿಗೆ ಏನೂ ಸುಖಾ ಇಲ್ಲೋ', 'ನಾಡೆಲ್ಲ ಬಿಟ್ಟರೂ ಸುಡುಗಾಡು ಬಿಡದು', 'ಸುಡಗಾಡ, ಈ ಜಂಜಾಟವಾದ ಪೇಪರನ್ನೇ ನೋಡ್ಲಾಕ

ಆಗಿಲ್ಲೋ ತಮ್ಮಾ'. ಈ ಹಾಸ್ಯ ಬರಹ 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ಏಪ್ರಿಲ್ ೧೮, ೧೯೯೯ ರಲ್ಲಿ ಪ್ರಕಟಗೊಂಡಿದೆ.

**ಜನರಲ್ ಬೋಗಿ :**

ಲೇಖಕರ ಏಳನೆಯ ಪ್ರಮಾದ. ಮಲ್ಲಿಕಾರ್ಜುನ ಹುಲಗಬಾಳಿಯವರು ತಮ್ಮ ಕೌಟುಂಬಿಕ ಜೀವನದ ಎಳೆಗಳನ್ನು ಎಳೆ ಎಳೆಯಾಗಿ ಬಿಚ್ಚಿದ್ದಾರೆ. ಅದರ ಜೊತೆಗೆ ಅತಿ ಕನಿಷ್ಠ ವಸ್ತುಗಳ ಮೂಲಕ ಹಾಸ್ಯದ ಲಾಸ್ಯವನ್ನು ಚಿತ್ರಿಸಿದ್ದಾರೆ.

'ನಂದ ಪ್ರಕಾಶನ, ಬನಹಟ್ಟಿ', ದಿನಾಂಕ ಜುಲೈ ೨೦೦೯ ರಂದು ಬಿಡುಗಡೆಗೊಳಿಸಿದರು. ಆ ಬಿಡುಗಡೆ ಸಮಾರಂಭ ವಿದ್ವತ್ಪೂರ್ಣ ಸಭೆಯಾಗಿತ್ತು. ಶ್ರೀ ಜಿ. ಎಸ್. ವಡಗಾಂವಿಯವರು 'ಪುಸ್ತಕ ಪರಿಚಯ' ಮಾಡಿದರು. ಜನರಲ್ ಬೋಗಿಗೆ... 'ಮುನ್ನುಡಿ', 'ಚಿರಂಜೀವಿ'. 'ಇವರು ಪ್ರಬಂಧ ಸಾಹಿತ್ಯದ ಇತಿಹಾಸ ಪ್ರಾರಂಭ, ಪ್ರಮುಖ ಹಾಸ್ಯ ಪ್ರಬಂಧಕಾರರ ಪರಿಚಯವನ್ನು ಮಾಡಿಕೊಡುವುದರೊಂದಿಗೆ ಮಲ್ಲಿಕಾರ್ಜುನ ಹುಲಗಬಾಳಿಯವರ 'ಜನರಲ್ ಬೋಗಿ'ಯಲ್ಲಿ ಪ್ರಯಾಣಿಸಿ ಕೊನೆಗೆ 'ಭೋಜನವಾದ'ದಲ್ಲಿ ವಿಶ್ರಾಂತಿ ಪಡೆದಿರುವರು'.

ಜನರಲ್ ಬೋಗಿಯಲ್ಲಿ ಲಲಿತ-ಲಘು ಎರಡರ ಮಿಶ್ರಣ ಎಂಬಂತೆ ಸೊಗಸಾದ ಪ್ರಬಂಧಗಳು ಈ ಸಂಕಲನದಲ್ಲಿವೆ. ನಾನು ಈವರೆಗೆ ಓದಿರುವ ಅವರೆಲ್ಲ ಲೇಖನಗಳಿಗಿಂತಲೂ ಭಿನ್ನವೆ ಆದ. ಉತ್ತಮ ಎನಿಸಿದ ಬಹರಗಳು. ಹಾಸ್ಯ ಲೇಖನದಷ್ಟು ತೆಳುವಾಗಿಲ್ಲ. ಲಲಿತ ಪ್ರಬಂಧದಷ್ಟು ಶಿಷ್ಟಬಂಧವಿಲ್ಲ. ಅತಿ ಸಹಜವಾದ ಸುಂದರಶೈಲಿ. ಕಥನ ನಿರೂಪಣೆಯ ಮೆರಗು, ಲಘು ಪ್ರಬಂಧ ಶೈಲಿಯ ಲೇಖನಗಳಿಗಿಂತಲೂ ಬೇರೆಯೇ ಆದ ರೀತಿ, ವಸ್ತು, ಚೌಕಟ್ಟು ಬಹುಶಃ ಈವರೆಗೆ ಯಾರು ಆಯ್ಕೆ ಮಾಡಿಕೊಳ್ಳದಿರುವ ವಿಷಯಗಳು ಉತ್ತರ ಕರ್ನಾಟಕದ ಮಾತುಗಾರಿಕೆಯ ಬೆಂಬಲದೊಂದಿಗೆ ಇಲ್ಲಿನ ಪ್ರಬಂಧಗಳೆಲ್ಲ ಅಪರೂಪದ್ದು ಆಗಿವೆ.

'ಜನರಲ್ ಬೋಗಿ' ಪ್ರಯಾಣದ ವೈಶಿಷ್ಟತೆ ಬಗ್ಗೆ, 'ಅಪ್ಪ-ನನ್ನಪ್ಪ' ಕೌಟುಂಬಿಕ ಚಿತ್ರಣ ಇಲ್ಲಿ ಕಂಡು ಬರುವುದು ತಂದೆ ಬಗ್ಗೆ ಲೇಖಕರಿಗಿದ್ದ ಅತ್ಯಂತ ಪ್ರೀತಿ, ವಾತ್ಸಲ್ಯ, ನಿಷ್ಠುರತೆಯನ್ನು ಶಿಸ್ತನ್ನು ಅಳವಡಿಸಿಕೊಂಡ ತಂದೆಯವರು ಲೇಖಕರ ಮೇಲೆ ಗಾಢವಾದ ಪ್ರಭಾವ ಬೀರಿದ್ದಾರೆ. ಈ ಪ್ರಬಂಧ ಸಂಕಲನದಲ್ಲಿ ಪ್ರತಿಯೊಂದು ಹಾಸ್ಯ ಲೇಖನಗಳು ಹೊಸ-ಹೊಸ ವಿಚಾರಗಳನ್ನೇ ಪ್ರಕಟಗೊಳಿಸಿವೆ.

'ಜನರಲ್ ಬೋಗಿಗೆ' ಈರಪ್ಪ ಎಂ. ಕಂಬಳಿ ಅವರು 'ಬೆನ್ನುಡಿ' ಬರೆದಿರುವರು. 'ಜನರಲ್ ಬೋಗಿ' ವರೆಗಿನ ಎಲ್ಲ ಉಳಿದ ಆರು ಪ್ರಬಂಧಗಳಲ್ಲಿ ವಿನೋದ ಸಾಹಿತ್ಯ ಯಾತ್ರೆ ಅನೇಕ ಕುತೂಹಲಕರ ಪ್ರಸಂಗಗಳಿಂದ ಕೂಡಿದೆ. ಪಳಗಿದ ಕೈಯಿಂದ ಮಾಡಿ ಬಡಿಸಿದ ಮೃಷ್ಟಾನ್ನ ಭೋಜನ ಇಲ್ಲಿವೆ.

ಇತ್ತೀಚೆಗೆ ಕನ್ನಡದಲ್ಲಿ ವಿರಳಪ್ರಮಾಣದಲ್ಲಿ ದೊರೆಯುವ ಲಲಿತ ಪ್ರಬಂಧಕ್ಕೆ ಇವರ 'ಜನರಲ್ ಬೋಗಿ' ಸೇರ್ಪಡೆ ಆಗಿ ಅದರ ನೆಲೆ-ಬೆಲೆ ಹೆಚ್ಚಿಸಿದೆ. ಆ ಅರ್ಹತೆ ಈ ಕೃತಿಗಿದೆ.

'ಜನರಲ್ ಬೋಗಿಗೆ ಬಂದು ಜನರ ಬಾಯಿಗೆ ಅಂಜಿದರೆಂತಯ್ಯಾ?', 'ಗೇಟಿಗೆ ಹೋದಮಾನ, ಅರಮನೆ ಕೊಟ್ಟರೂಬಾರದು' ಈ ಮಾತು 'ಅಡಕೆಗೆ ಹೋದ ಮಾನ ಆನೆ ಕೊಟ್ಟರೂಬಾರದು'

ಎಂಬ ಗಾದೆಯನ್ನು ನೆನಪಿಸುತ್ತದೆ.

'ಮೂತ್ರಾ ತುರಾಣಾಂ ನಭಯಂ ನ ಲಜ್ಜಾ!' ಸಂಸ್ಕೃತದ ಸುಭಾಷಿತ 'ಕಾಮಾತುರಣಾಂ ನ ಲಜ್ಜಾ ನ ಭಯಂ ನಾಸ್ತಿ' ಎಂಬುದರ ಅನುವಾದಂತೆ ಕಂಡು ಬರುವುದು.

'ಊಣದ ಜೋಕುಮಾರನ ಕಷ್ಟ. ಉಂಡ ಗಣಪತಿಗೆ ಹೇಗೆ ಅರ್ಥವಾದೀತು!'... ಹೀಗೆ ಈ ಪ್ರಬಂಧ ಸಂಕಲನ ಉದ್ದಕ್ಕೂ ಇಂಥ ಹಾಸ್ಯದ ಮಾತುಗಳನ್ನು ಕಾಣಬಹುದಾಗಿದೆ.

ಈ ಸಂಕಲನದಲ್ಲಿ ಹದಿನಾಲ್ಕು ಪ್ರಬಂಧಗಳು, ಅದರಲ್ಲಿ ಕೆಲವು ಹಾಸ್ಯಕ್ಕೆ ಮೀಸಲು, ಉಳಿದವು ಆತ್ಮಕಥಾ ರೂಪದ ರೂಪಕಗಳಾಗಿವೆ. ಒಂದು ರೀತಿಯ ವೈಯಕ್ತಿಕ ಪ್ರಬಂಧಗಳು ಇಲ್ಲಿ ಕಂಡು ಬರುತ್ತವೆ. ಪ್ರಧಾನ ಪಾತ್ರಧಾರಿ, ನಿರೂಪಕ ಲೇಖಕರಾಗಿದ್ದಾರೆ. ಎಲ್ಲವೂ ಅವರ ಜೀವಾನುಭವದ ಕಥೆಯ ಹಂದರಗಳಾಗಿ ಮೂಡಿಬಂದಿವೆ.

ಜನರಲ್ ಬೋಗಿ... ಶ್ರೀ ಸಾಮಾನ್ಯನ ಪ್ರಯಾಣದ ಒಂದು ಬೋಗಿ. ಇದರಲ್ಲಿ ಸಾಮಾನ್ಯನಿಂದ ಅಧಿಕಾರಿವರೆಗೆ ಹುಡುಗರಿಂದ ಮುದುಕರವರೆಗೆ, ಕೆಲವೊಮ್ಮೆ ಪ್ರಾಣಿಗಳಿಗೂ ಅಲ್ಲಿ ಪ್ರವೇಶ ಸ್ಥಾನವುಂಟು ಜನರಲ್ ಬೋಗಿ ಶ್ರೀಕೃಷ್ಣ ಅವತಾರದಲ್ಲಿ ಜಗತ್ತಿನ ದರ್ಶನವಾದಂತೆ, ಮಾನವ ಸ್ವರೂಪದ ದರ್ಶನವಾಗುತ್ತದೆ. ಇಡೀ ರಾತ್ರಿಯ 'ನಿಂತು ಪ್ರಯಾಣ' ಅನುಭವ ಎಲ್ಲವನ್ನು ಕಾಣಿಸುತ್ತದೆ. 'ಯಾರಾದರೂ ಅಹಂಕಾರಿಯ ಸೊಕ್ಕು ಮುರಿಯಬೇಕಾದ್ದರೆ, ಜನರಲ್ ಬೋಗಿಗೆ ತಳ್ಳಿಬಿಟ್ಟರಾಯಿತು. ಏರಿದಾಗಿನ ಹುಲಿ, ಇಳಿದಾಗ ಇಲಿ ಆಗಿರುತ್ತದೆ!'. ಎಂಬ ಜ್ಞಾನ ಬೋಧೆ ಅಲ್ಲಿವುಂಟಾಗುತ್ತದೆ. ಜೊತೆಗೊಂದು ಮಾನವೀಯ ದರ್ಶನವೂ ಆಗುತ್ತದೆ.

'ಎಮ್ಮೆಗಳಿಲ್ಲದ ಕೆರೆ ಕೆರೆಯೇ ಅಲ್ಲ' ಎಂದು ಹೇಳುವಷ್ಟು ಎಮ್ಮೆ ಸಂಕುಲದ ಕಕ್ಕುಲಾತಿ ಎತ್ತಿ ಕಾಣಿಸುವ 'ಎಮ್ಮೆ' ಪ್ರಬಂಧ ಹೊಸ ಹೊಸ 'ದರ್ಶನಗಳನ್ನು' ಮೂಡಿಸುತ್ತದೆ. ಬೀಚಿಯವರ 'ಎಮ್ಮೆ' ಎಂಬ ಹಾಸ್ಯ ಪ್ರಬಂಧ ಸಂಕಲನವನ್ನು ಇದು ಹೋಲುತ್ತದೆ.

ಲೇಖಕರಿಗೆ ಕೆಲವೊಂದು ಪ್ರಶ್ನೆಗಳು ಎಮ್ಮೆ ಬಗ್ಗೆ ಬಂದು ಹೋಗುತ್ತದೆ. ಹಸುವಿಗಿರುವ ಗೌರವ, ದೈವಿಕತೆ ಎಮ್ಮೆ ಗೇಕಿಲ್ಲ? ಹಸುವಿನಲ್ಲಿ ಲಕ್ಷಾಂತರ ದೇವತೆಗಳುಂಟು. ಆದರೆ ಎಮ್ಮೆಯಲ್ಲಿ ಒಂದು ದೇವರಿಗೆ ವಾಸವಾಗಲು ಸ್ಥಾನವಿಲ್ಲವೇ? ಲೇಖಕರು 'ಎಮ್ಮೆ ಪಕ್ಷಪಾತಿ', 'ಮಹಿಷೋಪಾಸಕ', 'ಎಮ್ಮೆ ಕಪ್ಪು ಜನರಿಗೆ ಪ್ರತಿನಿಧಿ' ಆಗಿದೆ. ಎಮ್ಮೆ ಪಟ್ಟದರಿಸಿ ಸ್ಥಾನ ಸಿಗಬೇಕೆಂಬ ಬಯಕೆ ಲೇಖಕರದು.

'ಗೇಟಿನ ಆಚೆ-ಈಚೆ' ಪ್ರಬಂಧ ಭಾವನಾತ್ಮಕವಾಗಿದೆ. ಸೊಗಸಾದ ಚಿಂತನೆ ಅಲ್ಲದೆ. ಸಾಮಾನ್ಯವಾದ ಈ ಗೇಟಿನ ಬಗ್ಗೆ ವಿಶಿಷ್ಟರೀತಿಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. 'ಗೇಟಾಲಂಕೃತವಾಗಿರದ ಮನೆ, ಮೂಗುತಿ ಇಲ್ಲದ ನಾರಿಯ ಮೂಗಿನಂತೆ ಕಳಾಹೀನ', 'ಅದು ಬೆಲ್‌ಗೇಟನದ್ದೇ ಆಗಿರಬಹುದು ಅಥವಾ ನಿಮ್ಮೂರ ಗೌಡಪ್ಪನದ್ದೇ ಆಗಿರಬಹುದು', ಎಂದು ಹೇಳುತ್ತ ಭಾವನೆಗಳನ್ನು ಯಾರು ಏರದ ಎತ್ತರಕ್ಕೆ ಕೊಂಡೊಯ್ಯುತ್ತಾರೆ. ಗೇಟಿನ ಬಗ್ಗೆ, ಗೇಟಿರುವ ಮನೆ ಬಗ್ಗೆ ಅದ್ಭುತವಾದ ಆಲೋಚನೆಗಳನ್ನು ಮುಂದಿಡುತ್ತಾರೆ. ಯಕಶ್ಚಿತ ಒಂದು ಗೇಟಿನ ಬಗ್ಗೆ ಹೀಗೆಲ್ಲ ರೋಮಾಂಚಿಕ ಆಗಬಹುದೇ? ಎಂದು 'ಅನ್‌ರೋಮಾಂಟಿಕ್'ಗಳು ಅಂದುಕೊಳ್ಳಬಹುದೇನೋ? ಮಲ್ಲಿಕಾರ್ಜುನ ಹುಲಗಬಾಳಿಯವರಂಥ 'ಗೇಟಿಗರಿಗೊಂದು ಜೈ'.

ಸುಣ್ಣದ ಬಗ್ಗೆ ಬಂದ ಮೊದಲ ಪ್ರಬಂಧ ಇದೇ ಇರಬಹುದು. 'ಕಲ್ಲರಳಿ ಹೂವಾಗಿ' ಎಂಬ 'ಸುಣ್ಣಗಾನ' ಎಷ್ಟೊಂದು ವಿಷಯಗಳನ್ನು ಅಡಕಗೊಂಡಿದೆಯಲ್ಲ ಎಂದು ಅಚ್ಚರಿಯಾಗುತ್ತದೆ. ವಾರ್ಷಿಕ ಸುಣ್ಣಸೇವೆಯ ಕಾರ್ಯಾಚರಣೆ ವಿವರಗಳು. ಎಷ್ಟು ಪೈಂಟ್ ವೈವಿಧ್ಯ ಬಂದರೂ, ಇಂದಿಗೂ 'ಸುಣ್ಣ ಬಡವರ ಬಂಧು' ಎನ್ನುವ 'ಸುಣ್ಣಮೇವ ಜಯತೆ! ಸುಣ್ಣದ ಹಿರಿಮೆಗೊಂದು ಕೊನೆಯಾಯಿತು.

'ಮೂತ್ರಾಲೋಚನೆ' ಮತ್ತು 'ಪಿತ್ತಾಸುರ' ಅತಿ ಆತ್ಮೀಯ ಅನಿಸಿಕೆಗಳು. ಎರಡೂ ಮಾನವ ದೇಹದ ವೈಶಿಷ್ಟ್ಯಗಳು. ಎರಡನ್ನೂ ಲೇಖಕರು ಮುಕ್ತವಾಗಿ ಪರಿಶೀಲಿಸಿದ್ದಾರೆ. ಯಾವ ಸಂಕೋಚವೂ ಇಲ್ಲದೆ ಎಳೆಎಳೆಯಾಗಿ ಎಳೆದು ಮುಂದಿಟ್ಟಿದ್ದಾರೆ. ಮನುಷ್ಯ ಎದುರಿಸುವ ದೈನಂದಿನ ಅಂಶದ ಬಗ್ಗೆ ಲೇಖಕರ ಕಳಕಳಿ ಮೆಚ್ಚಲೇಬೇಕಾದದ್ದು!.

ಇನ್ನುಳಿದ ಪ್ರಬಂಧಗಳಾದ 'ಮೋಬೈಕ್ ಮೋಹಿನಿ', 'ಮೀಸೆ ಮಣ್ಣಾಗಲಿಲ್ಲ ಸದ್ಯ!' 'ಭಾಷಾಣಕಾರರನ್ನು ಕರೆಯಲು ಹೋಗಿದ್ದೆ, 'ಅಂಗ್ರೇಜಿ ಮೋಹಾತ್ಮರು', 'ಮರಣೋತ್ತರ ಅನುಭವ' – ಒಂದಿಷ್ಟು ಹಾಸ್ಯ ಲೇಖನ ಶೈಲಿ ವಸ್ತುವಿಗೆ ಹತ್ತಿರವಾಗುವ ಲೇಖನಗಳು. ಅಲ್ಪಸ್ವಲ್ಪ ಪ್ರಬಂಧದ ವ್ಯಾಪ್ತಿಯಿಂದ, ಆ ಮಾತಿನ ಸೊಗಸಿನಿಂದ ಹೊರಬಂದ ಲೇಖನಗಳು, ಮಾಮಕೊಟ್ಟ ಮಗಳು ಮತ್ತು ಸ್ಕೂಟರ್ ಹಳೆಯದಾದಾಗ, ಹೊಸ ವಾಹನದ ಯೋಚನೆ ಮಾಡುವರು ಸಹಜ. ಆದರೆ, ಮೋಬೈಕ್ ಜೊತೆಗೆ ಮೋಹಿನಿಯನ್ನು ಬಯಸಿದಾಗ ಹೆಂಡತಿ ಎನ್ನುವವಳು ಹಿಂಡುತಿ ಆಗುವ ಪ್ರಹಸನ ಏನಾದರೂ ಆಗಲಿಲ್ಲ. ಎನ್ನುವ ಮಹಾತ್ಮರು, ಕಪಾಳಮೋಕ್ಷ ಮಾಡಿದರೂ 'ಹ್ಹಿ ಹ್ಹಿ' ಎನ್ನುತ ಸುಮ್ಮನಾಗುವವರು.

ಮೀಸೆಗೆ ಅವಮಾನ ಮಾಡುವವರು. ಇಂಥವರು ಮೀಸೆ ತಿರುವುದಿರಲಿ, ಮೀಸೆ ಇರಬಹುದಾದ ಜಾಗವನ್ನು ಸವರಲೂ ಅನರ್ಹರು. ಎನ್ನುವದೊಂದು ವಾದ 'ಕೆಳಗೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ಮಾತು ಇಲ್ಲಿ ಸೂಕ್ತ ಅಲ್ಲಿ ಅಹಂಭಾವ ವ್ಯಕ್ತವಾಗುತ್ತದೆ.

ಭಾಷಣ ಮಾಡುವವರು. ಭಾಷಣಕ್ಕೆ ಕರೆಯಲು ಹೋಗುವವರು. ಇವರ ಅಸಹಾಯಕತೆಯ ಹಾಸ್ಯ. ಅಂಗ್ರೇಜ ಮೋಹ ಆವರಿಸಿಕೊಂಡರೆ ಏನೇನು ಅನಾಹುತಗಳಾಗಬಹುದು ಮತ್ತು ಕನ್ನಡಾಂಗ್ಲ ಹೇಗೆ ಮೆರೆಯಬಹುದು. ಎನ್ನುವ ಅಂಗ್ರೇಜ ಮೋಹಾತ್ಮರ ನಡೆನುಡಿ ಪತ್ರಿಕೆಯ ಮುದ್ರಾರಾಕ್ಷಸ ತಪ್ಪಾಗಿ ಜೀವಂತ ವ್ಯಕ್ತಿಯನ್ನು ದಿವಂಗತ್ವದ ಕಡೆಗೆ ದೂಡಿದಾಗ... ಅಂಥವರು ಒಂದು ದಿನದ ಅತಿಗಣ್ಯ ವ್ಯಕ್ತಿ ಆಗುತ್ತಾರೆ. ಕೊನೆಗೆ ಅದೂ ಒಂದು ಥ್ರಿಲ್ ಹೀಗೆ ಲಲಿತ ಪ್ರಬಂಧ ಮತ್ತು ಲಘು ಪ್ರಬಂಧಗಳ ನಡುವೆ ಹುಲಗಬಾಳಿ ಅವರ 'ಜ, ಬೋ' ಓಡಾಡುತ್ತದೆ. ಅವರ ಲಲಿತ ಪ್ರಬಂಧಗಳ ಸೊಗಸು ಲಘು ಪ್ರಬಂಧಗಳಲ್ಲಿ ಒಂದಿಷ್ಟು ಮಸುಕಾದರೂ, ಅಲ್ಲಲ್ಲಿ ಅದರ ಹೊಳಮು ಕಾಣುವುದಿಲ್ಲ. ಅಲ್ಲಿವರೆಗೆ, ಲೇಖಕರ ಅವರ ಬರವಣಿಗೆ ಮತ್ತು ಅವರ ಉದ್ದೇಶ ಯಶಸ್ವಿಯಾಗಿದೆಯೆಂದೇ ಭಾವಿಸಬಹುದು.

ಖಂಡಿತವಾಗಲೂ ಇಲ್ಲಿರುವ ಎಲ್ಲವೂ ನಗೆಯುಕ್ಕಿಸುವ ಪ್ರಬಂಧಗಳು ಬಹುಶಃ 'ಹಾಸ್ಯೋತ್ಸವ'ಗಳಲ್ಲಿ ಈ ಲೇಖನಗಳಲ್ಲೊಂದನ್ನು ಓದಿದರೆ, ಕಿಕ್ಕಿರಿದು ನೆರೆದಿರುವ ಹಾಸ್ಯ ಪ್ರಿಯರು ಖಂಡಿತ ಹೊಟ್ಟೆ ಹಿಡಿದುಕೊಂಡು ನಗುವದರಲ್ಲಿ ಸಂದೇಹವಿಲ್ಲ.

ಕನ್ನಡ ಲಲಿತಪ್ರಬಂಧ ಸಾಲಿಗೆ ಇವು ಸೇರ್ಪಡೆಯಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

# ಅಧ್ಯಾಯ – ೪

## ವಸ್ತು ಮತ್ತು ಆಶಯ

ಕವಿಯಾಗಲಿ, ಕಥೆಗಾರನಾಗಲಿ, ಕಾದಂಬರಿಕಾರನಾಗಲಿ, ಪ್ರಬಂಧಕಾರನಾಗಲಿ, ನಾಟಕಕಾರನಾಗಲಿ ತಾನು ಕೃತಿ ರಚಿಸುವಾಗ ಆಯಾ ಕಾಲ, ಸಾಹಿತ್ಯ ಕೃತಿಗಳು, ಭಾಷೆಕೂಡ ಆತನ ಬರವಣಿಗೆ ಮೇಲೆ ಪ್ರಭಾವ ಬೀರದೆ ಇರಲಾರದು.

'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂದು ವಿಶ್ವನಾಥ ಮೊದಲಾದ ಅಲಂಕಾರಿಕರು ಸಾಹಿತ್ಯಕ್ಕೆ 'ರಸವೇ ಜೀವಾಳ' ಎಂದು ಸಾರಿದರು.

ಪ್ರಾಚೀನ ಕವಿಗಳು ತಮ್ಮ ಕಾವ್ಯಕ್ಕೆ ಸಂಸ್ಕೃತ ಹಾಗೂ ಪ್ರಕೃತ ಸಾಹಿತ್ಯದ ಕೃತಿಗಳನ್ನು ಆಕರಗಳನ್ನಾಗಿ ಮಾಡಿಕೊಂಡು, ಅವುಗಳಲ್ಲಿಯ ವಸ್ತುಗಳನ್ನು ತಮ್ಮ ಕಾಲಕ್ಕೆ ಅನುಗುಣವಾಗಿ ಬಳಸಿಕೊಂಡು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿರುವರು.

ನಮ್ಮ ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಸಾಹಿತಿಗಳು ತಮ್ಮ ಹರಟೆ ಅಥವಾ ಹಾಸ್ಯ ಪ್ರಬಂಧಗಳಿಗೆ ತಮ್ಮ ಸುತ್ತಮುತ್ತಲಿನ ಘಟನೆ, ಸನ್ನಿವೇಶ, ವ್ಯಕ್ತಿ ಮುಂತಾದವುಗಳನ್ನು ತಮ್ಮ ಪ್ರಬಂಧಗಳಿಗೆ ವಸ್ತುಗಳನ್ನಾಗಿ ಆಯ್ಕೆ ಮಾಡಿಕೊಂಡಿರುವರು. ಮೂರ್ತಿರಾಯರು ತಮ್ಮನ್ನೇ ಹಾಸ್ಯದ ಒಂದು ವಸ್ತುವನ್ನಾಗಿ ಪ್ರಬಂಧಗಳನ್ನು ರಚಿಸಿದರು. ಬೀಚಿಯವರು 'ತಿಮ್ಮ' ಪಾತ್ರದ ಮೂಲಕ ಸಾಹಿತ್ಯಲೋಕಕ್ಕೆ ತಮ್ಮ ವಿಚಾರಗಳನ್ನು ತೋರ್ಪಡಿಸಿದರು. ಹಾಗೆ ಜಿ. ಎಸ್. ವಡಗಾಂವಿ 'ಮಾನಿಂಗ' ಎಂಬ ಪಾತ್ರದ ಮೂಲಕ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿರುವರು.

ಹುಲಗಬಾಳಿಯವರ ನೂರಕ್ಕೂ ಹೆಚ್ಚು ಪ್ರಬಂಧಗಳನ್ನು ಅಧ್ಯಯನ ಮಾಡಲಾಗಿ ಅವುಗಳ ವಸ್ತುವನ್ನು ಆಧರಿಸಿ ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

೧) ಪರಿಸರ ಆಧರಿತ ಪ್ರಬಂಧಗಳು.

೨) ಸನ್ನಿವೇಶವನ್ನು ಆಧರಿಸಿದ ಪ್ರಬಂಧಗಳು.

೩) ಘಟನಾ ಆಧರಿತ ಪ್ರಬಂಧಗಳು.

೪) ವ್ಯಕ್ತಿ ಆಧರಿತ ಪ್ರಬಂಧಗಳು.

೫) ಸ್ಥಳ ಆಧರಿತ ಪ್ರಬಂಧಗಳು.

೬) ವಸ್ತು ಆಧರಿತ ಪ್ರಬಂಧಗಳು.

೭) ಭಾಷಾ ಆಧರಿತ ಪ್ರಬಂಧಗಳು.

೧)   ಪರಿಸರ ಆಧರಿತ ಪ್ರಬಂಧಗಳು : ಅವರ ಸುತ್ತಮುತ್ತಲಿನ ಪರಿಸರವನ್ನು ಆಧರಿಸಿ ವಸ್ತುವನ್ನು ಆಯ್ಕೆ ಮಾಡಿಕೊಂಡು ರಚಿಸಲಾದ ಪ್ರಬಂಧಗಳಾಗಿವೆ. ಉದಾ : ಬಸ್ಸ್ಟ್ಯಾಂಡ ಪಕ್ಕದಲ್ಲೊಂದು ಮನೆಯಮಾಡಿ, ಮನೆಹುಡುಕಿ ನೋಡು, ಜಾತ್ರೆ: ಕಂಡದ್ದು – ಕೊಂಡದ್ದು, ವೀರಪ್ಪನ–ಕ್ಷಮಾಪನ ಇಂತಹ ವಿಷಯಗಳನ್ನು ತಮ್ಮ ಹಾಸ್ಯ ಪ್ರಬಂಧಗಳ ವಸ್ತುವನ್ನಾದರಿಸಿ ಲೇಖಕರು ಹಾಸ್ಯಭರಿತವಾಗಿ ಚಿತ್ರಿಸಿದ್ದಾರೆ.

೨)   ಸನ್ನಿವೇಶವನ್ನು ಆಧರಿಸಿದ ಪ್ರಬಂಧಗಳು : ಲೇಖಕರು ಕಾಲಕ್ಕನುಗುಣವಾಗಿ ಬಂದಂತಹ ಸನ್ನವೇಶಗಳನ್ನೇ ವಸ್ತುವನ್ನಾಗಿಟ್ಟುಕೊಂಡು ರಚಿಸಿದಂತಾ ಪ್ರಬಂಧಗಳು ಹಾಸ್ಯದಿಂದ ಕೂಡಿದ್ದು, ವಿಡಂಬನೆಯು ಕೂಡಾ ಅಲ್ಲಿ ಬಂದು ಹೋಗುತ್ತದೆ. ಉದಾ : ಮೇರಾ ಭಾರತ್ ಮಹಾನ್, ಅಷ್ಟ ನವ ಪಕ್ಷಗಳ ವೃತ್ತಾಂತವು ಪಿ.ಎಮ್. ಹುದ್ದೆಯೂ, ಮೌಲ್ಯಮಾಪನ, ಮಿ॥ ಕಂತು ಪ್ರಿಯಾ ಕಲಿಯುಗಿ, ಪ್ರಮಾದ ಪ್ರಸಂಗಗಳು ಇತ್ಯಾದಿಗಳನ್ನು ನಾವು ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

೩)   ಘಟನಾ ಆಧರಿತ ಪ್ರಬಂಧಗಳು : ಲೇಖಕರು ತಮ್ಮ ಸುತ್ತಮುತ್ತ ನಡೆದಂತಾ ಘಟನೆಗಳನ್ನೆ ತಮ್ಮ ಪ್ರಬಂಧಕ್ಕೆ ವಸ್ತುವನ್ನಾಗಿ ಆಧರಿಸಿ ಅವುಗಳಿಗೆ ಹಾಸ್ಯ ಲೇಪನ ಮಾಡಿದ್ದಾರೆ. ಉದಾ : ಶ್ರೀಮತಿ ಎಂಬ ಭಿನ್ನಮತಿ, ಪ್ರಮೋಷನ್ನೋ... ಪೂಜಾಫಲವೋ..., ಕತ್ತೆ (ಪ್ರ)ಸಂಗ, ಸ್ಕೂನೀಜಂ, ಸೀರೆಗೊಂದು ಸೀರೆ, ನಕ್ಕರಾ ಕತ್ತೆರಾಜರು ಇತ್ಯಾದಿಗಳನ್ನು ನಾವು ಹಾಸ್ಯ ಪ್ರಬಂಧಗಳನ್ನು ಉದಾಹರಣೆಯಾಗಿ ನೀಡಬಹುದಾಗಿದೆ.

೪)   ವ್ಯಕ್ತಿ ಆಧರಿತ ಪ್ರಬಂಧಗಳು : ಹಾಸ್ಯ ಪ್ರಬಂಧಕಾರರಾದ ಹುಲಗಬಾಳಿಯವರು ತಮ್ಮ ಅಕ್ಕಪಕ್ಕದಲ್ಲಿದ್ದ ವ್ಯಕ್ತಿಗಳನ್ನು ರಾಜಕೀಯ ಮುಖಂಡರನ್ನು, ರಾಷ್ಟ್ರೀಯ ಮುಖಂಡರನ್ನು ಆಧರಿಸಿ ಈ ಹಾಸ್ಯ ಲೇಖನಗಳನ್ನು ರಚಿಸಿದ್ದಾರೆ. ಉದಾ : ನಮ್ಮಲ್ಲೊಬ್ಬ ವೀರಪ್ಪನ, ಪೂರ್ ಪೂಲನ್, ಪತಿ ಸಿಂಪತಿ, ಶಿವಪ್ಪಾ ಕಾಯೋ ತಂದೆ, ಉದರೋಪನಿಷತ್ ಮುಂತಾದ ಪ್ರಬಂಧಗಳನ್ನು ನಾವಿಲ್ಲಿ ಉದಾಹರಣೆಗಾಗಿ ನೋಡಬಹುದಾಗಿದೆ.

೫)   ಸ್ಥಳ ಆಧರಿತ ಪ್ರಬಂಧಗಳು : ಹಾಸ್ಯ ಪ್ರಬಂಧಕಾರರು ಆದರೂ ಕೂಡಾ ಹುಲಗಬಾಳಿಯುವರು ತಮ್ಮ ಅತಿ ಆತ್ಮೀಯ ಸ್ಥಳವಾದ ಬಿಜಾಪುರದ ಬಗ್ಗೆ ಹಾಸ್ಯ ಲೇಖನವನ್ನು ಚಿತ್ರಿಸಿರುವುದರೊಂದಿಗೆ ಅದರ ಜೊತೆಗೆ ತಾವು ಹೊಂದಿದ ಅತ್ಯಂತ ನಿಕಟವಾದ ಸಂಬಂಧವನ್ನು ಚಿತ್ರಿಸಿದ್ದಾರೆ. ಬೆಂಗಳೂರೀ ಸಂಚಾರಿ ಸಖಿಗೊಂದು ಪ್ರೇಮಪತ್ರ ಈ ಒಂದು ಹಾಸ್ಯ ಲೇಖನದಲ್ಲಿ ಲೇಖಕರು ಬೆಂಗಳೂರಿನ ಸಾರಿಗೆ ವ್ಯವಸ್ಥೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಹಾಸ್ಯ ಮಯವಾಗಿ ಚಿತ್ರಿಸುವದರ ಮೂಲಕ ಅಲ್ಲಿಯ ಸಂಚಾರಿ ವ್ಯವಸ್ಥೆಯ ಬಗ್ಗೆ ತಿಳುವಳಿಕೆ ನೀಡಿದ್ದಾರೆ.

೬) ವಸ್ತು ಆಧರಿತ ಪ್ರಬಂಧಗಳು : ಲೇಖಕರು ಇತ್ತೀಚಿನ ದಿನಮಾನಗಳಲ್ಲಿ ಹೊಸದಾಗಿ ಬಂದಂತಾ ಸರ್ಕಾರದ ಹೊಸ ಹೊಸ ಸೌಲಭ್ಯಗಳನ್ನು ಕುರಿತು ವಸ್ತುವನ್ನಾಧರಿಸಿ ಕೆಲವು ಹಾಸ್ಯ ಪ್ರಬಂಧಗಳನ್ನು ರಚಿಸಿದ್ದಾರೆ. ಅವು ಇಂತಿವೆ : ಸಾಲಾ ಮನ್ನಾ, ಕ್ರಿಕೆಟ್ ಭಿನ್ನ ಪ್ರೇಮ್, ಗುರಿತಿಸಿಕೊಳ್ಳುವುದು ಇತ್ಯಾದಿ.

೭) ಭಾಷಾ ಆಧರಿತ ಪ್ರಬಂಧಗಳು : ಲೇಖಕರು ಉತ್ತರ ಕರ್ನಾಟಕದ ಗ್ರಾಮೀಣ ಭಾಷೆಯನ್ನು ಹಾಗೂ ಆಂಗ್ಲ ಭಾಷೆಯ ಪಡೆನುಡಿಗಳನ್ನು, ಕನ್ನಾಡಾಂಗ್ಲ ಭಾಷೆಯನ್ನು ಪರಿವರ್ತನೆಮಾಡುತ್ತಾ ಹಾಸ್ಯಮಯವಾಗಿ ಅವುಗಳನ್ನು ತಮ್ಮ ಹಾಸ್ಯ ಲೇಖನಗಳಲ್ಲಿ ಬಳಸುವುದರ ಮೂಲಕ ಓದುಗರನ್ನ ನಗೆಯ ಹೊನಲಲ್ಲಿ ಮುಳುಗಿಸಿದ್ದಾರೆ. ಉದಾ : ಲಟ್ಟಿಂಗ್-ಪಟ್ಟಿಂಗ್, ಅಂಗ್ರೇಜಿ ಮೋಹಾತ್ಮರು, ಎಂಥ ಚಮಾತ್ಕಾರವಯ್ಯಾ ಈ ನಮಸ್ಕಾರ ಮುಂತಾದ ಪ್ರಬಂಧಗಳನ್ನು ನಾವು ಇಲ್ಲಿ ಉದಾಹರಣೆಗಾಗಿ ನೀಡಬಹುದಾಗಿದೆ.

ಲೇಖಕರು ತಮ್ಮ ಪ್ರಬಂಧದಲ್ಲಿ ಬಳಸಿದಂತಹ ಕೆಲವು ವಿಶೇಷವಾದ ಪದಗಳನ್ನು ನಾವಿಲ್ಲಿ ಉದಾಹರಣೆಗಾಗಿ ನೋಡಬಹುದಾಗಿದೆ. ಸಣಕಲು ತಮ್ಮಂಬ್ಯಗಳೂ, ಟೊಪ್ಪಿಗೆಧಾರಿ ಟೊಣಪರೂ, ರುಮಾಲು ಪೇಟಾದ ರೈತಣ್ಣರೂ, ಬ್ಲಾಕ್ ಬ್ಯೂಟಿ, ಅಂಗ್ರೇಜಿ ಮೋಹಾತ್ಮರು, ಮಹಿಷೋಪಾಸಕ, ಹೀನೋಪಚಾರ, ಅಮೂತ್ರರು, ಸುಣ್ಣಮೇಯ ಜಯತೇ, ಮೂತ್ರಾಲೋಚನೆ, ಚರರ ಗಂಗೋತ್ರಿ, ಪಿತ್ತಾಗಮನ, Soft tongue, Sugar coat, ಭಾಮಜ (ಬಾರೀ ಮಹತ್ವದ ಜನ), ಈ ರೀತಿಯಾಗಿ ನಾವು ಏಳು ಪ್ರಬಂಧಗಳ ಉದ್ದಗಲಕ್ಕೂ ಅಧ್ಯಯನ ಮಾಡುತ್ತಾ ಸಾಗಿದಾಗ ಹಲವಾರು ಜನಪದ ಕನ್ನಡ ವಚನ, ತ್ರಿಪದಿ, ಹಾಗೂ ಇಂಗ್ಲೀಷ ಪದಗಳ ಪ್ರಭಾವ ಹೆಚ್ಚಾದುದನ್ನು ಕಂಡುಕೊಳ್ಳಬಹುದಾಗಿದೆ. ಕಾರಣ ಲೇಖಕರು ವೃತ್ತಿಯಿಂದ ಇಂಗ್ಲೀಷ ಪ್ರಾಧ್ಯಾಪಕರು, ಪ್ರವೃತ್ತಿಯಿಂದ ಸಾಹಿತಿಗಳು.

ಟಿ. ಸುನಂದಮ್ಮಾ 'ಸರಸಮ್ಮ' ಎಂಬ ಪಾತ್ರ ಚಿತ್ರಣದ ಮೂಲಕ ಹಾಸ್ಯ ಸಾಹಿತ್ಯದ ಸರ್ವ ವಿಚಾರಗಳ ಜೊತೆಗೆ, ಸಮಾಜವನ್ನು ತಿದ್ದುವ ಕಾರ್ಯಮಾಡಿದ್ದಾರೆ. 'ಶಿಕ್ಷಕ ಕೇವಲ ಉಪದೇಶ ಮಾಡಬಲ್ಲನು ಆದರೆ ಹಾಸ್ಯಗಾರ ಸಮಾಜದ ಓರೆ-ಕೋರೆಗಳನ್ನು ತನ್ನ ನಗುವೆಂಬ ಅಸ್ತ್ರದಿಂದ ತಿದ್ದಬಲ್ಲನು'.

ಎಲ್ಲ ಹಾಸ್ಯ ಸಾಹಿತಿಗಳಂತೆ ನಮ್ಮ ಹಾಸ್ಯ ಸಾಹಿತಿ ಹುಲಗಬಾಳಿಯವರು 'ವಿಠ್ಠ' ಎಂಬ ಪಾತ್ರದ ಮೂಲಕ ರಾಜಕೀಯ, ಸಾಹಿತ್ಯಿಕ, ಸಂಘ-ಸಂಸ್ಥೆಗಳ 'ಮುಖಂಡನ', 'ಅಧ್ಯಕ್ಷರ', 'ಸಾಹಿತಿಯ' ವಿಚಾರಗಳನ್ನು ಚಿತ್ರಿಸಿದ್ದಾರೆ.

ಆದರೆ ಒಮ್ಮೆ ಲೇಖಕರ ಮಿತ್ರನಾದ 'ವಿಠ್ಠೂ' ಇನ್ನೊಂದು ಕಡೆ ಹೆಂಡತಿಯ ತಮ್ಮನಾಗಿ ಚಿತ್ರಿಸಬಾರದಾಗಿತ್ತು. 'ಸರಸು' ಪಾತ್ರದ ಮೂಲಕ ಸ್ತ್ರೀ ಸಹಜ ಎಲ್ಲ ಗುಣಗಳನ್ನು ಲೇಖಕರು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿರುವರು. 'ಸರಸು' ಸ್ತ್ರೀ ಕುಲದ ಪ್ರತಿನಿಧಿಯಂತೆ ನಮಗೆ ಕಂಡುಬರುವ

ಪಾತ್ರವಾಗಿದೆ. ಆದರೆ ಲೇಖಕರು ಟಿ. ಸುನಂದಮ್ಮಾ ಬಳಸಿಕೊಂಡ 'ಸರಸಮ್ಮ' ಪಾತ್ರದ ಬದಲಾಗಿ ಬೇರೆ ಹೆಸರನ್ನು ಬಳಸಿಕೊಳ್ಳಬಹುದಾಗಿತ್ತು.

ಲೇಖಕರು ಸೂಕ್ಷ್ಮ ಪ್ರವೃತ್ತಿವರಾಗಿದ್ದು, ಅತಿ ಸಾಮಾನ್ಯ ವಸ್ತುಗಳಾದ 'ಕಾರ್ಡು', 'ಗೇಟು', 'ಸುಣ್ಣ', 'ಕನ್ನಡಕ ಬಳಗ', 'ಕುರ್ಚಿ', 'ಕಾಡುವ ಹೆಂಡತಿ', 'ನಾಲಿಗೆ', 'ಸೀರೆ', 'ಸ್ಪೂನ್', 'ಉದರ', 'ಜಾತ್ರೆ', 'ಪಕ್ಷಗಳ ಕಟ್ಟುವಿಕೆ', 'ಮೌಲ್ಯಮಾಪನ', 'ಕತ್ತೆ', 'ಎಮ್ಮೆ', 'ಜನರಲ್ ಬೋಗಿ', 'ಭೋಜನ' ಈ ರೀತಿಯಾಗಿ ದಿನನಿತ್ಯ ಬಳಕೆಯಾಗುವ ವಸ್ತುಗಳ ಕುರಿತು ಹಾಸ್ಯ ಪ್ರಬಂಧಗಳನ್ನು ಲೇಖಕರು ರಚಿಸಿರುವುದರ ಮೂಲಕ ಓದುಗರನ್ನು ಹಾಸ್ಯದ ಹೊನಲಿನಲ್ಲಿ ಮುಳುಗಿಸಿರುವರು. ಅವರ ಜೊತೆಗೆ ಚಿಂತನೆಗೆ ದೂಡುವರು. ಸಾಮಾನ್ಯ ವಸ್ತುಗಳು ಸಾಮಾಜಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ, ಕೌಟುಂಬಿಕವಾಗಿ ಬಳಕೆ ಆಗುತ್ತವೆ ಎಂಬುದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಹಾಸ್ಯ ಸಾಹಿತಗಳ ಮುಖ್ಯ ಉದ್ದೇಶ ಸಮಾಜವನ್ನು ವ್ಯಂಗ್ಯ, ವಿಡಂಬನೆ ಮೂಲಕ ತಿದ್ದುವುದಾಗಿದೆ. ಹುಲಗಬಾಳಿಯವರು ತಮ್ಮ ಹಾಸ್ಯ ಜಾಯಮಾನಕ್ಕೆ ಅನುಗುಣವಾಗಿ ಅತಿ ಕನಿಷ್ಠವಸ್ತುಗಳನ್ನು ಸಾಹಿತ್ಯದ ಚೌಕಟ್ಟಿಗೆ ಒಳಪಡಿಸಿ ಒಂದು ಹಾಸ್ಯ ಲೇಖನ ಸಿದ್ಧಪಡಿಸಿರುವರು (ರಚಿಸಿರುವರು).

ಲೇಖಕರು ಬಳಸಿಕೊಂಡಿರುವ ಪುಸ್ತಕಗಳ ಶೀರ್ಷಿಕೆ (ತಲೆಬರಹ)ಗಳು ವಿಶಿಷ್ಟತೆಯಿಂದ ಕೂಡಿವೆ. 'ಟೊಂಯ್ ಟೊಂಯ್ ಮಾತಿನಿಂದ ಪ್ರಾರಂಭವಾದ ಇವರ ಹಾಸ್ಯ ಬರಹಗಳು 'ಉದರೋಪ ನಿಷತ್'ನಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ ವ್ಯಕ್ತಿಗಳಿಗೆ ಕಿವಿಮಾತು ಹೇಳುವುದಾಗಿದೆ. 'ಗುಡ್ ಬೈ ಬಿಜಾಪುರ' ಹೆಸರೇ ಸೂಚಿಸುವಂತೆ ಬಿಜಾಪುರ ಜಿಲ್ಲೆಗೆ ೧೯೯೭ ವರೆಗೆ ಇದ್ದ ನಂಟಸ್ಥಿಕೆ, ಆತ್ಮೀಯತೆ, ಮುಗಿದಿರುವ ವಿಷಾದ ಕಂಡು ಬರುವುದು. 'ಚಮಚಾಗಿರಿ' ಅಥವಾ 'ಚಾಡಿಕೋರರು' ಸಮಾಜದಲ್ಲಿ ಯಾವ ರೀತಿ ಅವಾಂತರ ಮಾಡುವರು ಎಂಬುದನ್ನು ಲೇಖಕರು ಹಾಸ್ಯದ ಮೂಲಕ ಜನರನ್ನು ಎಚ್ಚರಿಸಿರುವರು.

ಕೇವಲ ೧೫ ಪೈಸೆಯ ಅತಿ ಕನಿಷ್ಠ ಬೆಲೆಯಲ್ಲಿ ನಮಗೆ ಸಿಗುವ ಈ ಕಾರ್ಡಿನ ಮೂಲಕ 'ಗಿನ್ನಿಸ್'ದಾಖಲೆ ಮಾಡಿರುವುದನ್ನು ನಾವು ಕಾಣಬಹುದಾಗಿದೆ. 'ಸೀರೆಗೊಂದು ಸೀರೆ' – 'ಒಂದರ ಜೊತೆಗೆ ಒಂದು ಪುಕ್ಕಟೆಯಾಗಿ ದೊರೆಯುವ ಈ ವಸ್ತುವಿನಲ್ಲಿ ಯಾವುದು ಎಷ್ಟು ಗುಣಾತ್ಮಕವಾದುದು ಎಂಬುದನ್ನು ತಿಳಿದುಕೊಳ್ಳುವ ಹೊತ್ತಿಗೆ ಅದರ 'ಬಣ್ಣ ಬಯಲಾಗಿರುತ್ತದೆ'. ಆಧುನಿಕ ಜಗತ್ತಿನಲ್ಲಿ ಜನರನ್ನು ಮೋಸ ಮಾಡುವ ರೀತಿಯನ್ನು ಲೇಖಕರು ತಮ್ಮ ಈ ಹಾಸ್ಯ ಲೇಖನದಿಂದ ಓದುಗರನ್ನು ಎಚ್ಚರಿಸುವ ರೀತಿ ಅತಿ ಸೂಕ್ತವಾದುದು.

ಹೆಂಡತಿ ಟೈಪಿಂಗ್ ಕಲಿಯುವ ಆಸೆಯನ್ನು ಲೇಖಕರು ಹಾಸ್ಯಮಯವಾಗಿ ಚಿತ್ರಿಸಿರುವರು. ಕಲಿಯುವ ಆಸೆಯ ಜೊತೆಗೆ, ಶ್ರಮ ಕೂಡ ಅಲ್ಲಿ ಮುಖ್ಯ. ಕೇವಲ ಯಾರಾದರೂ ಹೊಸದನ್ನು ಹುಟ್ಟುಹಾಕಿದರೆ, ನಾನು ಅದನ್ನು ಮಾಡಬೇಕು ಎಂಬ ಜಂಭ, ಅಹಂಕಾರ ಅಲ್ಲಿರಬಾರದು ಎಂಬುದನ್ನು ಲೇಖಕರು ಸಮಾಜದ ಜನರಿಗೆ ಕಿವಿಮಾತು ಹೇಳುವರು.

'ರೂಢಾರೂಢರು' ನಮ್ಮ ಜಾಯಮಾಯಕ್ಕೆ ತಕ್ಕಂತೆ ನಾವು ಅಭ್ಯಾಸ ಬಲದಿಂದ ಯಾವುದೇ ಶಬ್ದವನ್ನು ರೂಢಿಸಿಕೊಂಡರೂ ಅದು ನಮ್ಮನ್ನು ಅಪಹಾಸ್ಯಕ್ಕೆ ಎಡೆ ಮಾಡುತ್ತದೆ ಎಂದು ಲೇಖಕರು ತಮ್ಮ ಉದಾಹರಣೆಗಳಿಂದ ಸ್ಪಷ್ಟಪಡಿಸಿರುವರು.

'ನಿಮಿಷ' ಅಂದರೆ 'ಮಿನಿಟು' ಅದು ನಮ್ಮನ್ನು ಗೊಂದಲಕ್ಕೀಡು ಮಾಡಿತು. ನಮಸ್ಕಾರ ಮಾಡುವ ರೀತಿಯನ್ನು ಲೇಖಕರು ಹಾಸ್ಯದ ಮೂಲಕ ಚಿತ್ರಿಸಿದ್ದಾರೆ. ನಾವು ಅದನ್ನು ಓದಿ (ಕೂಡ) ನಮ್ಮ ತಪ್ಪನ್ನು ತಿದ್ದಿಕೊಳ್ಳದಿದ್ದರೆ ಅದು ಓದುಗರ ತಾತ್ಸಾರ ಭಾವನೆ ಎಂದು ಅಂದುಕೊಳ್ಳಬಹುದು.

ಪ್ರಬಂಧ, ಹರಟೆ, ನಿಬಂಧ ಈ ಮೂರು ಪದಗಳಲ್ಲಿ ಅರ್ಥ ಭೇದವಿದೆ. ಪ್ರಬಂಧಕ್ಕೆ ನಿಬಂಧವೆನಬಾರದು; ನಿಬಂಧಕ್ಕೆ ಹರಟೆ ಎಂದು ಕರೆಯಲಾಗದು. ಆ ಮೂರರಲ್ಲಿಯೂ ಸೂಕ್ಷ್ಮವಾದ ವ್ಯತ್ಯಾಸವಿದೆ. ಆದರೆ ಸತ್ವವನ್ನಲ್ಲ. ನಿಬಂಧ ದೊಡ್ಡದಾದರೆ ಪ್ರಬಂಧವೆನಿಸಿಕೊಳ್ಳುತ್ತದೆ. ಇವೆರಡೂ ಅವಳಿ ಜವಳಿ ಇದ್ದಂತೆ.

ಹರಟೆಗೆ ಯಾವುದೇ ನಿಯಮಗಳಿಲ್ಲ, ಸ್ವಾತಂತ್ರ್ಯವುಂಟು ಬುದ್ಧಿಗಿಂತ ಕಲ್ಪನೆಗೆ, ಪಾಂಡಿತ್ಯಕ್ಕಿಂತ ಪ್ರತಿಭೆಗೆ ಇಲ್ಲಿ ಅವಕಾಶವುಂಟು. ಹರಟೆಗೆ ತುದಿ ಎಂಬುದೇ ಇಲ್ಲ. ಅದು ಎಲ್ಲಿಯೋ ಪ್ರಾರಂಭವಾಗಿ ಎಲ್ಲಿಯೋ ಮುಗಿದು ಬಿಡುತ್ತದೆ. ಹಾಸ್ಯವು ಮಾತ್ರ ಸಣ್ಣ ಪ್ರಮಾಣದಲ್ಲಿರುತ್ತದೆ. ಹರಟೆಗೆ ಯಾವುದೇ ವಿಷಯದ ನಿಶ್ಚಿತತೆ ಇಲ್ಲ. ಅದು ಶುದ್ಧ ತಲೆ ಹರಟೆ.

ಹರಟೆಯಲ್ಲಿ ವಿಷಯವಸ್ತು ಮಹತ್ವದಲ್ಲ ಹೇಳುವ ರೀತಿ ಮಹತ್ವದ್ದು: ಪ್ರಬಂಧಕ್ಕೆ ಒಂದು ಪಾಂಡಿತ್ಯಪೂರ್ಣ ವಿಷಯದ ಅವಶ್ಯಕತೆಯಿದೆ. ಆದರೆ ಹರಟೆಗೆ ಯಾವ ವಿಷಯವಾದರೂ ಸರಿಯೇ ಹರಟೆಗಾರ ಸ್ವರ್ಗ-ನರಕ, ದೇವ-ದೆವ್ವ ಮೊದಲಾದ ಗಂಭೀರ ವಿಷಯ ಕುರಿತು ಬರೆಯಬಲ್ಲನು. ಅದೇ ತೆರನಾಗಿ ಅತಿ ಕನಿಷ್ಠ ವಸ್ತುಗಳಾದ ಚಪ್ಪಲಿ, ಕಟ್ಟಿಗೆ, ಕಸಬರಿಗೆ, ಕತ್ತೆ ಕುರಿತು ರಚಿಸಬಹುದು. ಒಟ್ಟಿನಲ್ಲಿ ಹಾಸ್ಯ ಸಾಹಿತಿಯ ಬರವಣಿಗೆಯ ವಿಷಯವ್ಯಾಪ್ತಿ ಪ್ರಪಂಚದಷ್ಟು ವಿಶಾಲ. ಪ್ರಬಂಧ, ಹರಟೆಗಳು ಗದ್ಯ ಸ್ವರೂಪ, ಪದ್ಯ ರೂಪದಲ್ಲಿ ರಚಿಸಲು ಸಾಧ್ಯವಿಲ್ಲ. ಗದ್ಯಸಾಹಿತ್ಯದಲ್ಲಿ ಮಾತ್ರ ಬರಹಗಾರನ ಒಟ್ಟು ವಿಚಾರಗಳನ್ನು ವ್ಯಕ್ತಪಡಿಸಲು ಒಂದು ರಂಗಸಜ್ಜಿಕೆಯಾಗಿದೆ.

'ಹರಟೆಗಾರ' ಓದುಗನ ಮಿತ್ರನಾಗಿ, ಆತನ ಬೇಸರ, ನೋವನ್ನು ಹೋಗಲಾಡಿಸಿ ಆತನಲ್ಲಿ ಆನಂದ ಚಿಲುಮೆಯನ್ನು ಹಾಗೂ ಉತ್ಸುಕತೆಯ ದಾರಿಯನ್ನು ಸೂಚಿಸುತ್ತಾನೆ. ಹಳಗನ್ನಡದಲ್ಲಿ ಪ್ರಬಂಧ ಸಾಹಿತ್ಯ ಬೆಳೆದು ಬಂದಿಲ್ಲ. ಆದರೆ ಅದು ಹೊಸಗನ್ನಡದಲ್ಲಿ ವಿವಿಧ ತೆರನಾಗಿ ಸತ್ವಪೂರ್ಣ, ಕಲಾಪೂರ್ಣವಾಗಿ ಬೆಳೆದಿದೆ.

ದು. ನಿಂ. ಬೆಳಗಲಿ ಅವರು :

ಹುಲಗಬಾಳಿಯವರ 'ಟೊಂಯ್ ಟೊಂಯ್ ಮಾತು' ಪ್ರಬಂಧಕ್ಕೆ ಮುನ್ನುಡಿ ಈ ರೀತಿಯಾಗಿ ವ್ಯಕ್ತಪಡಿಸಿರುವರು. 'ಪ್ರಚಲಿತ ಸಮಕಾಲೀನ ವಿಷಯಗಳನ್ನೇ ನಗು ವ್ಯಂಗ್ಯಗಳಲ್ಲಿ ಭಟ್ಟಿ ಇಳಿಸಿ ಅರ್ಥವತಾಗಿ, ಅವುಗಳಿಗೆ ಒಂದು ವಿಶಿಷ್ಟ ಸ್ವರೂಪ ನೀಡಿ ಚಿತ್ರಿಸುವ ಕಲಾತ್ಮಕತೆ ಶ್ರೀ ಹುಲಗಬಾಳಿಯವರು ಕರಗತ ಮಾಡಿಕೊಂಡಿದ್ದಾರೆ. ಅಷ್ಟೇ ಸಹಜವಾಗಿ ಅವುಗಳನ್ನು ಕಣ್ಣೆದುರು ತಂದು ನಿಲ್ಲಿಸುತ್ತಾರೆ. ಇದು

ಅವರ ಬರವಣಿಗೆಯ ಹದಗಾರಿಕೆಯಾಗಿದೆ ಎಂದು ವಸ್ತುವಿನ ಬಗ್ಗೆ ತಮ್ಮ ಅನಿಸಿಕೆ ನೀಡುವರು.

ಡಾ|| ವ್ಹಿ. ಎಸ್. ಮಾಳಿ ಅವರು ಹಿಡಕಲ್‌ದಲ್ಲಿ ನಡೆದ ವಿಚಾರ ಸಂಕೀರ್ಣದಲ್ಲಿ ಹುಲಗಬಾಳಿಯವರ ಹಾಸ್ಯ ಪ್ರಬಂಧಗಳ ವಸ್ತುವಿನ ಬಗ್ಗೆ ಈ ರೀತಿ ತಮ್ಮ ಅಭಿಪ್ರಾಯಗಳನ್ನು ಅನಾವರಣಗೊಳಿಸಿರುವರು – 'ಇಲ್ಲಿ ಲಘು ಬರಹಗಳ ಪ್ರಕ್ರಿಯೆ ಬೆರಗುಗೊಳಿಸುವಂಥದ್ದು... ತುಂಬ ಕಲಾತ್ಮಕವಾದುದು... ಯಾವುದಕ್ಕೂ ಎಲ್ಲಿಯೂ ಅಶ್ಲೀಲತೆಯ ವೈರಸಗಳು ಅಂಟಿಕೊಂಡಿಲ್ಲ... ಇದು ಪ್ರಬುದ್ಧತೆಯ ಲಕ್ಷಣ'.

ಹುಲಗಬಾಳಿಯವರ ಐದನೆಯ ಹಾಸ್ಯ ಪ್ರಬಂಧ 'ಅನುಕೂಲಕ್ಕೊಂದು ಅವತಾರ'ಕ್ಕೆ ಹಿನ್ನುಡಿ (ಬೆನ್ನುಡಿ)ಯಲ್ಲಿ ಈ ರೀತಿ ತಮ್ಮ ವಿಚಾರಗಳನ್ನು ಈ ರೀತಿ ಪ್ರಸ್ತುತಪಡಿಸಿರುವರು – 'ಹುಲಗಬಾಳಿಯವರ 'ಹಾಸ್ಯದ ಸಹಜ ಸಿದ್ಧಿ'ಗೆ ಅವರ ಬರಹಗಳೇ ಮಾದರಿಯಾಗಿದೆ. ನಾಡಿನ ಪ್ರಬುದ್ಧ ಹಾಸ್ಯ ಸಾಹಿತಿಗಳಲ್ಲಿ ಇವರೊಬ್ಬರು. 'ಕಿತಾಪತಿ ಬ್ರಹ್ಮ' ಎಂದು ಅವರನ್ನು ಹೊಗಳಿದ್ದಾರೆ. ನಮ್ಮ ಸುತ್ತ–ಮುತ್ತ ಹುಲುಸಾಗಿ ಹುದುಗಿರುವ ಹಾಸ್ಯದ ಅದಿರನ್ನು ಬಗೆದು, ಸಂಸ್ಕರಿಸುವ ಕಲೆ ಅವರಿಗೆ ಕರಗತವಾಗಿದೆ'.

'ಸಹಜ ವಿನೋದ ಪ್ರಜ್ಞೆಯಿಂದ ನಮಗೆ ಇನ್ನೊಬ್ಬ ಪಾವೆಂ ಅಥವಾ ಬೀಚಿ ದೊರೆತಾನೆಂಬ ವಿಶ್ವಾಸ ಮೂಡುತ್ತದೆ'.

ಡಾ|| ಹಾ.ಮಾ.ನಾ ಅವರು : ಹಗುರ ಬರಹಗಳು, ಹರಟೆ ಎಂಬ ಒರಟು ಮಾತಿಗಿಂತ ಇದೇ ತುಂಬ ಮೇಲು. ನಿಮ್ಮ ಈ ಹಗುರ ಬರಹಗಳಲ್ಲಿ ನಮ್ಮನ್ನು ನಾವೇ ನೋಡಿಕೊಂಡು ನಗಬಹುದು...' ಎಂದು ಹುಲಗಬಾಳಿಯವರ 'ಟೊಂಯ್ ಟೊಂಯ್ ಮಾತು' ಹಾಸ್ಯ ಪ್ರಬಂಧಗಳ ಬಗ್ಗೆ ತಮ್ಮ ಅನಿಸಿಕೆ ವ್ಯಕ್ತಪಡಿಸಿರುವರು.

**ಆಶಯ :**

ಏಳು ಪ್ರಬಂಧಗಳು 'ಏಳು ನಕ್ಷತ್ರದಂತೆ ಮಿಂಚುತ್ತವೆ', ಪ್ರಥಮ ಪ್ರಬಂಧ ಸಂಕಲನದ ಒಟ್ಟು ಹದಿಮೂರು ಪ್ರಬಂಧಗಳು. ಬಸ್ಟ್ಯಾಂಡ್ ಪಕ್ಕದಲ್ಲಿ ಮನೆ ಮಾಡಿದರೆ ಗೆಳೆಯರ, ನೆಂಟರಿಷ್ಟರ ಕಾಟ ತಪ್ಪದು, ಅಳಿಯ 'ವಿಠ್ಠ' ಸಾಲ ಮಾಡಿ ಅಕ್ಕನ ಉಂಗುರವನ್ನು ಹೋಟೆಲ್‌ದಲ್ಲಿ ಕೊಡುವುದು. ಈಗಿನ ಹುಡುಗರ ಬುದ್ಧಿಗೆ ಹಿಡಿದ ಕೈಗನ್ನಡಿಯಾಗಿದೆ. ಕ್ರಿಕೆಟ್ ಪ್ರೇಮದಲ್ಲಿ ತಾನು ಪ್ರೀತಿಸುವ ರೀತಿಯ ಪದಗಳಿಗೆ ತಳಕು ಹಾಕಿ ಹಾಸ್ಯದ ಹೊನಲನ್ನು ಹುಟ್ಟುಹಾಕಿದೆ. ರಾಜಕೀಯ ವ್ಯಕ್ತಿಗಳ ಕರಾಮತ್ತು; ದುಡ್ಡುಗಳಿಕೆಯ ಜಾಣ್ಮೆ ಎದ್ದು ಕಾಣುವುದು. 'ಟೊಂಯ್ ಟೊಂಯ್ ಮಾತು' ಇಲ್ಲಿ ಭಾಷೆ ಪರಿಣಾಮಕಾರಿಗಾಗಿ ಬಳಕೆಯಾದದ್ದು ಸೂಕ್ತವಾಗಿದೆ. (ಕಂಡುಬರುವುದು).

**ಉದರೋಪನಿಷತ್ :**

ಜಗತ್ತಿನ ಎಲ್ಲ ಪ್ರಾಣಿ, ಪಕ್ಷಿ, ಮನುಷ್ಯನಿಗೆ ಉದರ ಇದ್ದುದ್ದರಿಂದಲೇ ಏನೆಲ್ಲಾ ಕಷ್ಟಪಡಬೇಕಾಗುತ್ತದೆ. 'ಹೊಟ್ಟೆ ಹೊಲಗೇರಿ ಹೋಗಿಸಿತು' ಎಂಬ ನಮ್ಮ ಹಿರಿಯರ ಅನುಭವ ಪೂರ್ಣ ಮಾತು ಈ ಪ್ರಬಂಧಕ್ಕೆ ಅನ್ವಯಿಸುವುದು.

ಹದಿನಾಲ್ಕು ಹಾಸ್ಯ ಬರಹಗಳಿಂದ ಇವು ಆಧುನಿಕ ಜಗತ್ತಿನ ಶಿಕ್ಷಣರಂಗ, ಸ್ತ್ರೀ ಸ್ವಾತಂತ್ರ್ಯ, ಸಾಹಿತ್ಯ ಸಮ್ಮೇಳನ ನಡೆಯುವ ಪರಿ, ರಾಜಕೀಯ ಪಕ್ಷಗಳ ಹುಟ್ಟು ಹಾಕುವಿಕೆ, ಮೌಲ್ಯಮಾಪನದ ರೀತಿ-ನೀತಿ ಹಾಗೂ ಕೆಲವೊಂದು ಪಾರಿಭಾಷಿಕ ಪದಗಳನ್ನು ಲೇಖಕರು ಹುಟ್ಟುಹಾಕಿದ್ದಾರೆ. ಪುರುಷಾರ್ಥಕ್ಕೆ ಗಡ್ಡವು ಸೂಕ್ತ ಎನ್ನುವ ವಾದ, ರೂಢಿಯಿಂದ ಬಂದ ಕೆಲವು ಪದಗಳು, ಶಿಕ್ಷಕರನ್ನು, ವಿದ್ಯಾರ್ಥಿಗಳನ್ನು ನಗೆಪಾಟಲು ಮಾಡುವ ರೀತಿ ವಿಶೇಷವಾದದ್ದು, ಅದರ ಜೊತೆಗೆ ಚಿಂತನೆಗೆ ತೊಡಗುವಂತೆ ಮಾಡುತ್ತವೆ. ಪ್ರಾಚೀನಕಾಲದಿಂದಲೂ ದೇವರ ಹೆಸರು ನೋಡಿದಾಗ ಅವು ಪತ್ನಿ-ನಂತರ ಪತಿ ಹೆಸರು ಕಾಣುತ್ತೇವೆ. ಆಧುನಿಕರು ತಮ್ಮ ಹೆಂಡತಿ ಹೆಸರನ್ನು Short ಆಗಿ ಕರೆಯಲು ಪ್ರಯತ್ನಿಸಿ ಹಾಸ್ಯಕ್ಕೆ ಎಡೆಯಾಗುವ ಪ್ರಸಂಗ ಸ್ವಾರಸ್ಯಕರವಾಗಿದೆ. ನಾವು ಅಂದುಕೊಂಡಂತೆ ಜೀವನದಲ್ಲಿ ಆಗಲಿ, ಜಗತ್ತಿನಲ್ಲಿಯಾಗಲಿ ನಡೆಯದು, ಕೇವಲ ಕನಸಿನಲ್ಲಿ ಮಾತ್ರ ನಾವು ಸಂತೋಷಪಡಬಹುದು. ನಿಜಜೀವನದಲ್ಲಿ ದುಃಖ, ದುಮ್ಮಾನ, ನೋವುಗಳಿಂದ ಕೂಡಿರಬಹುದಾಗಿದೆ.

**ಗುಡ್ ಬೈ ಬಿಜಾಪುರ :**

ಪ್ರಸ್ತುತ ಪ್ರಬಂಧ ಸಂಕಲನ 'ಹದಿನಾಲ್ಕು' ಬರಹಗಳಿಂದ ಸ್ವಾರಸ್ಯಕರವಾಗಿದೆ. ಬಿಜಾಪುರ ಜೊತೆಗಿನ ಆತ್ಮೀಯ ಸಂಬಂಧ, ಬಿಡಿಸಲಾರದ ನಂಟು. ಲೇಖಕರ ಪತ್ನಿ ಒಂದಕ್ಕೊಂದು ಸೀರೆ ಪುಕ್ಕಟ್ಟೆ ಎಂದು ಸೀರೆ ಖರೀದಿಸಿ ಮೋಸ ಹೋಗುವ ಪ್ರಸಂಗ. ಒಂದು ಕಾರ್ಡಿನ ಬೆಲೆ ಕಡಿಮೆ ಅದರ ಉಪಯೋಗ ಬಹಳ. ಟೈಪಿಂಗ ಮೇಲಿನ ವ್ಯಾಮೋಹ, ನಮಸ್ಕಾರದ ವಿವಿಧ ಭಂಗಿಗಳು, ಚಾಡಿಕೋರರ ಬಗ್ಗೆ ಎಚ್ಚರಿಕೆ ಹೊಂದುವುದು, ತಮ್ಮನ್ನು ತಾವು ಸಮಾಜದಲ್ಲಿ ಗುರುತಿಸಿಕೊಳ್ಳುವದು ಹೇಗೆ ಎಂಬುದು. ಹೇಗೆ ಎಂಬುದನ್ನು ಸರ್ಕಾರ ನಿರ್ಧಾರ ಮಾಡಿದೆ. ನಾವು ನಮ್ಮ ಅಡ್ಡ ಹೆಸರು, ಹುದ್ದೆಗಳಿಂದ ಗುರುತಿಸಿಕ್ಕೊಳಬಹುದಾಗಿದೆ. ಬಿಂದುನಲ್ಲಿ ಸಿಂಧುವನ್ನು ತೋರ್ಪಡಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

**ಚಷ್ಮಾ ಚರಿಷ್ಮಾ :**

ಪ್ರಸ್ತುತ ಪುಸ್ತಕ ೧೫ ಪ್ರಬಂಧಗಳನ್ನು ಒಳಗೊಂಡಿದೆ. 'ಕೆಲವು ಹಾಸ್ಯದ ಒಗ್ಗರಣೆಯಿಂದ ಕೂಡಿದ್ದು, ಕೆಲವು ಪೂರ್ತಿ ಹಾಸ್ಯ ರಸಾಯನಗಳಾಗಿವೆ'. ಹೂವಿನ ಬಗ್ಗೆ ವಿವಿಧ ಕವಿ, ಲೇಖಕರ ಅಭಿಪ್ರಾಯ ಸುಂದರವಾಗಿ ಮೂಡಿ ಬಂದಿದೆ. 'ಕನ್ನಡಕ ದಾರಿಗಳ ಸಂಘ' ಅವರ ವಿಚಾರಗಳನ್ನು ಅತಿ ಸುಂದರವಾಗಿ ಹಾಸ್ಯಮಯವಾಗಿ ಚಿತ್ರಿಸಿದ್ದಾರೆ. ಕೀಲಿಯ ಬಾರದೇ ಇದ್ದಾಗ ವಿಧ್ವಾನ ಸಹಾಯಪಡೆದದ್ದು, ನಾವು ನಮ್ಮಷ್ಟಕ್ಕೆ ಇರಲಾರದೆ ಬೇರೆಯವರ ಸಹಾಯ ಸಹಕಾರ ಅವಶ್ಯ ಎಂಬುದನ್ನು ತಿಳಿಸುತ್ತದೆ. ಮಂಗನ ಬಾಲದಲ್ಲಿ ಬಾಲ್ಯದ ನೆನಪುಗಳನ್ನು ಮೆಲುಕು ಹಾಕಲಾಗಿದೆ. 'ಸೂಕ್ಷೋಪಜೀವಿಗಳು' ಮಾತಿನ ಸೂಕ್ಷ್ಮತೆ ಬಗ್ಗೆ ತಿಳಿಸುವುದರ ಮೂಲಕ ಜನರನ್ನು ಮಾತಿನ ಕಡೆಗೆ ಗಮನ ಹರಿಸುವಂತೆ ಸೂಚ್ಯವಾಗಿ ತಿಳಿಸಿದ್ದಾರೆ. 'ಬಹಿರಂಗ ಪ್ರಿಂಗುರು' ಲೇಖನ ಸಮಾಜಕ್ಕೆ ಹಿಡಿದ ಕೈಗನ್ನಡಿಯಾಗಿದೆ. 'ಉದರದುರಿತ' ಮತ್ಸರಭಾವನೆ ತಾಳದೇ ನಾವು ಅವರಂತೆ ಉನ್ನತ ಮಟ್ಟಕ್ಕೆ ಏರುವ ರೀತಿ ತಿಳಿಯೋಣ, ಎಂಬ ರಹಸ್ಯ ಅಲ್ಲಿದೆ. ಕಾಡು ಹೆಂಡತಿ ಇದ್ದರೆ ಆತ ತತ್ವಜ್ಞಾನಿ ಹಾಗೂ ಸಮಾಜದಲ್ಲಿ ಒಬ್ಬ ಶ್ರೇಷ್ಠವ್ಯಕ್ತಿಯಾಗಿ ಪರಿವರ್ತನೆ ಆಗಬಹುದಾಗಿದೆ. ಅತಿಥಿಗಳ ಅವಾಂತರ ಮನೆಯವರ

ಎಲ್ಲ ಕೆಲಸಗಳಿಗೆ ಅಡ್ಡಿವುಂಟುಮಾಡುವರು. ಅದಕ್ಕಾಗಿ ನಮಗೆ ಸಮಯಪ್ರಜ್ಞೆ, ಮುಂಚಿತವಾಗಿ 'ಮನೆಗೆ ಬರಲು' ಅನುಮತಿ ಕೇಳುವ ಒಂದು ರೂಢಿ ಈಗಾಗಲೇ ಸುರು ಆಗಿದೆ. ಜೀವನದಲ್ಲಿ ಯಾರು ಯಾರಿಗಾಗಿ ಕಾಯುವ ರೀತಿ ವಿಶೇಷತೆಯಿಂದ ಕೂಡಿದೆ. ಯಾವ ಕೆಲಸವೂ 'ಸಮಯ ಬಂದಾಗ' ಮಾತ್ರ ಆಗಲು ಸಾಧ್ಯ. ಬೆಂಗಳೂರಿನ ಬಸ್ಸಿನ ಸಂಚಾರದ ರೀತಿಯನ್ನು ಓದುಗರಿಗೆ ಸೂಚ್ಯವಾಗಿ ತಿಳಿಯಪಡಿಸಲಾಗಿದೆ. ಒಂದನ್ನು ಕಳಕೊಂಡರೆ ಮತ್ತೊಂದು ನಿಮಗೆ ಸಿಗುವುದು. ಪ್ರತಿಯೊಂದಕ್ಕೆ ಸಮೀಪದ ಮಾರ್ಗ ಹುಡುಕುವ ಪರಿ ವಿಶಿಷ್ಟವಾದುದು. ಒಟ್ಟಿನಲ್ಲಿ ಸಮಾಜದಲ್ಲಿ ಗೌರವದಿಂದ, ಮರ್ಯಾದೆಯಿಂದ, ಅಭಿಮಾನದಿಂದ, ಪ್ರೀತಿ, ಆದರದಿಂದ ಬಾಳುವುದು ಮೇಲು.

**ಅನುಕೂಲಕ್ಕೊಂದು ಅವತಾರ :**

ಪ್ರಸ್ತುತ ಹಾಸ್ಯ ಸಂಕಲನ ಇಪ್ಪತ್ನಾಲ್ಕು ಪ್ರಬಂಧಗಳನ್ನು ಒಳಗೊಂಡಿದೆ. ಪೆನ್ಸನ್ ಆದ ನೌಕರದಾರ ಸ್ಥಿತಿ ಯಾವ ರೀತಿ ಎಂಬುದನ್ನು ಚಿತ್ರಿಸಿದ್ದಾರೆ. ಪೆನ್ಸನ್‌ದಾರರಿಗೆ ಕೂಡ ಕಿವಿ ಮಾತು ಹೇಳಲಾಗಿದೆ. 'ಸುಂಕದ ಕಟ್ಟೆಯ ಕುಂಟನ ಹಾಗೆ ಎಲ್ಲರಿಂದ ಅನಾದರಕ್ಕೆ ಗುರಿಯಾಗುವ ಈ ಪೆನ್ಸನ್ ಪ್ರಾಣಿಗಳನ್ನು; ಪೆನ್ಸನ್ನಾದರೂ ಈ ಟೆನ್ಸನ್ ಅನ್ನೊದು ತಪ್ಪಿದಲ್ಲ ಬಿಡು'.

ಸಾಹೇಬರ ಸಾಹಿತ್ಯ – ಕೇವಲ ದುಡ್ಡು ಕೊಟ್ಟು ಪುಸ್ತಕ ಬರೆಯಿಸಿ, ಪ್ರಶಸ್ತಿಗಿಟ್ಟಿಸುವ ರೀತಿ ವಿಶಿಷ್ಟವಾದುದು. ಆಧುನಿಕವಾಗಿ ಈ ಎಲ್ಲ ಅಪರಾ ತಪಾರಾ ಕೃತ್ಯಗಳು ನಡೆದೇ ಇವೆ. ಎಂಬುದನ್ನು ಓದುಗರಿಗೆ ತಿಳಿಸಲು ಲೇಖಕರು ಹಾಸ್ಯ ಲೇಪನ ಮಾಡಿರುವರು.

ಪ್ರಮೋಶನ್ನು ಹೆಂಡತಿ ಪೂಜೆಯಿಂದ ಫಲಿಸಿತು, ಅಥವಾ ಮೇಲಾಧಿಕಾರಿಯ ಸಹಾನುಭೂತಿಯಿಂದಲೋ ತಿಳಿಯದು. ಕೊನೆಗೆ ಪ್ರಮೋಶನ್ ಆರ್ಡರ್ ಕ್ಯಾನಸಲ್ ಆಗುವ ರೀತಿ ಚಿಂತೆಗೇಡು ಮಾಡುವುದು. ಸರ್ಕಾರಿ ನೌಕರರ ಪರಿಸ್ಥಿತಿ ಇಂಥದ್ದೇ ಆಗಿದೆ. Soಲ್ಡ್... Soಒಲ್ಡ್ – ಈ ಪ್ರಬಂಧ ದೇವರ ಇಚ್ಛೆಯಂತೆ ಎಲ್ಲಿ ನೆರವೇರುವುದು ಎಂಬುದನ್ನು ತಿಳಿಸುತ್ತದೆ. ಸನ್–ಮಾನ ಮಾಡುವ ರೀತಿ ಅತಿಥಿಯನ್ನು ನಗೆ ಪಾಟಲು ಮಾಡುವ ಹೀನಪದ್ಧತಿ ಇಲ್ಲಿದೆ ಸಮ್ಮಿಶ್ರ ಸಂಸಾರ– ೨೫ – ನಾವು ಸಮ್ಮಿಶ್ರ ಸರ್ಕಾರ ಬಗ್ಗೆ ಕೇಳಿದ್ದೇವೆ. ಆದರೆ ಸಮ್ಮಿಶ್ರ ಸಂಸಾರ ಮನೆಯ ಎಲ್ಲ ವ್ಯವಹಾರಗಳು ಒಬ್ಬೊಬ್ಬರಿಗೆ ಹರಿದು ಹಂಚಿ ಹೋಗಿರುತ್ತವೆ. ಈಗಿನ ಹುಡುಗರು ಕೇವಲ ಕಾಲೇಜ, ಶಾಲೆ ಕಟ್ಟೆ ಏರುವರು ಹೊರತು ಅಲ್ಲಿ ಶಿಕ್ಷಣ ವ್ಯವಸ್ಥೆ, ನೀತಿ–ನಿಯಮ, ಅಭ್ಯಾಸದ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಶಾಲೆಗೆ ಬಾರದೆ, ಪರೀಕ್ಷೆ ಕೂಡ್ರದೇ ಇರುವವರು ಪಾಸಾಗುವ ಆಧುನಿಕ ಶಿಕ್ಷಣ ನೀತಿ ಮುಂದುವರೆದರೆ ಮುಂದೋಂದು ದಿನ ಜ್ಞಾನಿಗಳನ್ನು, ಬುದ್ಧಿವಂತರನ್ನು ಹುಡುಕುವ ಕಾಲಬರಬಹುದಾಗಿದೆ. ಹೆಸರು ಬದಲಾಯಿಸಿದಂತೆ ಹಣೆ ಬರಹ ಬದಲಾಯಿಸಲಾದೀತೆ. ದುಡ್ಡು ಇದ್ದವನು ಮಾತ್ರ ರಾಜಕಾರಣ ಮಾಡಬಹುದು. ಎಲೆಕ್ಷನ್ ಎಂದರೆ ಕೇವಲ ಹಣ ಮಾಡುವ ಉದ್ಯೋಗ ಎನ್ನುವಷ್ಟರ ಮಟ್ಟಿಗೆ ಕೀಳಾಭಿಪ್ರಾಯ ಹೊಂದಿರುವ ರಾಜಕಾರಣಿಗಳು / ಜನರಿದ್ದಾರೆ.

**ನಾಲಿಗೆಯ ಮೇಲೊಂದಿಷ್ಟು :**

ಇದು ಹದಿನೆಂಟು ಪ್ರಬಂಧಗಳ ಒಂದು ಸಂಕಲನ. ಅದರಲ್ಲಿ ಐದು ಪ್ರಬಂಧಗಳು ಮಾತ್ರ

ಹೊಸದಾಗಿ ಸೇರ್ಪಡೆ ಆಗಿವೆ. ಕುರ್ಚಿಗಳ ರೀತಿ, ಪ್ರಕಾರ, ಅವುಗಳ ಮಹತ್ವ, ಕಲಾತ್ಮಕತೆ, ಅವು ತಯಾರಿಸುವಿಕೆ, ಬಳಕೆ ಬಗ್ಗೆ ವಿಶಿಷ್ಟವಾಗಿ, ಹಾಸ್ಯಭರಿತವಾಗಿ, ಹುಲಗಬಾಳಿಯವರು ಚಿತ್ರಿಸಿದ್ದಾರೆ. ಕುರ್ಚಿಯಿಂದ ಮಾತ್ರ ಕೆಲವರಿಗೆ ಕಿಮ್ಮತ್ತು, ಕೆಲವರಿಂದ ಕುರ್ಚಿಗೆ ಕಿಮ್ಮತ್ತು ಬರುವುದು. 'ಗುಂಗೋ'ಗಳು ಯಾವ ಪ್ರತಿಷ್ಠೆ ಒಳಗಾಗುವುದಿಲ್ಲ. ಹತ್ತರ ಜೊತೆ ಹನ್ನೊಂದು ಆಗಿ ಬಾಳುವುದು. ಪತ್ರಿಕೆ ಕೈಯಲ್ಲಿದ್ದರೆ ಓದಲಿಕೆ, ಬಿಸಿಲು ತಡೆಯಲು, ನಿದ್ದೆ ಬಂದಾಗ ಹಾಸಿಮಲಗಲು, ಕನ್ನೆಯರನ್ನು ನೋಡುವ ಚಪಲ ವಿಶಿಷ್ಟವಾದುದು. 'ಬಾಲ'ಕ್ಕೆ ಕಿಮ್ಮತ್ತು ಬರಬೇಕಾದರೆ 'ಯ'ದ ಒಂದು ಒತ್ತು (್ಯ) ಮಂಗನ ಬಾಲ ಹಾಕಿದರೆ ಬಾಲ್ಯಕ್ಕೆ ಕಿಮ್ಮತ್ತು ಬರುವುದು.

ಕರ್ಣ-ನಾಲಿಗೆಗೆ ಅವಿನಾಭಾವ ಸಂಬಂಧವಿದೆ. ಕರ್ಣ ಗಂಡಸಿನ ರೀತಿ ಗಂಭೀರವಾಗಿದ್ದರೆ, ನಾಲಿಗೆ ಹೆಂಗಸಿನ ಹಾಗೆ, ಚಂಚಲ ನಾಲಿಗೆಯಿಂದ ಜಗತ್ತನ್ನು ಗೆಲ್ಲಬಹುದು ಎಂಬ ಮಾತು ಸೂಕ್ತವಾಗಿದೆ.

**ಜನರಲ್ ಬೋಗಿ :**

ಇದು ಹದಿನಾಲ್ಕು ಪ್ರಬಂಧಗಳಿಂದ ಕೌಟುಂಬಿಕ ಚಿತ್ರಣ ನೀಡುತ್ತದೆ. ಕೆಲವು ಅತಿ ಕನಿಷ್ಟ ವಸ್ತುಗಳಿಂದ ಹಾಸ್ಯವನ್ನು ಹುಟ್ಟುಹಾಕಿವೆ. ಜನರಲ್ ಬೋಗಿ ಎಲ್ಲರಿಗೂ ಪ್ರಯಾಣಿಸಲು ಮುಕ್ತ ಅವಕಾಶ ಕಲ್ಪಿಸುತ್ತದೆ. ಈ ಪ್ರಬಂಧ ಓದಿದಾಗ 'ಜಗತ್ತಿನ ಜನಸಾಮಾನ್ಯರ ಚಿತ್ರಣ' ನಮಗೆ ಕಂಡು ಬರುತ್ತದೆ. ಅಪ್ಪ-ನನ್ನಪ್ಪ ಪ್ರಬಂಧದಲ್ಲಿ ಲೇಖಕರು ತಮ್ಮ ತಂದೆಯವರ ಬಗ್ಗೆ ಹೊಂದಿದ ಪ್ರೀತಿ, ಅಭಿಮಾನ ವಿಶಿಷ್ಟವಾದವು. ತಂದೆಯವರ ಶಿಸ್ತು, ನಿಷ್ಠುರತೆ ಇವರ ಬರವಣಿಗೆ ಮೇಲೆ ಪ್ರಭಾವ ಬೀರಿವೆ. ಎಮ್ಮೆ ಬಗ್ಗೆ ಬಹುಸುಂದರವಾಗಿ ಹಾಸ್ಯವನ್ನು ಚಿತ್ರಿಸಿದ್ದಾರೆ. ಗೇಟಿನ ಆಚೆ-ಇಚೆ ಬಗ್ಗೆ, ಗೇಟು ಮನೆಗೆ ಎಷ್ಟು ಅವಶ್ಯ ಎಂಬುದನ್ನು ತಿಳಿಸಿದ್ದಾರೆ. ಸುಣ್ಣದ ಬಗ್ಗೆ ಇದೆ ಪ್ರಥಮ ಪ್ರಬಂಧವಾಗಿರಬಹುದು. ಸದ್ಯ ಎಷ್ಟು ಹೊಸ ರೀತಿಯ 'ಪೆಂಟ' ಬಂದರೂ ಸುಣ್ಣಕ್ಕೆ ಅಷ್ಟೇ ಮಹತ್ವವಿದೆ. 'ಮೂತ್ರಾಲೋಚನೆ', 'ಪಿತ್ತಾಸುರ' ಪ್ರಬಂಧಗಳು ದೇಹದ ಆರೋಗ್ಯಕ್ಕೆ ಇವುಗಳ ಪಾತ್ರ ಎಷ್ಟೆಂಬುದನ್ನು ಚಿತ್ರಿಸಿದ್ದಾರೆ. ಮರಣೋತ್ತರ ಅನುಭವ, 'ಮೋಟೈಕ್ ಮೋಹಿನಿ' ಮೀಸೆ ಮಣ್ಣಾಗಲಿಲ್ಲ. 'ಅಂಗ್ರೇಜಿ ಮೋಹಾತ್ಮರು' ವಿಶಿಷ್ಟ ಹಾಸ್ಯಗಳಿಂದ ಜನರನ್ನು ಎಚ್ಚರಿಸುವ ಘಂಟೆಗಳಾಗಿವೆ.

ಹುಲಗಬಾಳಿಯವರ ಏಳು ಪ್ರಬಂಧ ಸಂಕಲನಗಳು ವಿವಿಧ ವಿಷಯಗಳಿಂದ ಹಾಸ್ಯವನ್ನು ಹುಟ್ಟು ಹಾಕಿ, ಹಾಸ್ಯದ ಹೊನಲನ್ನು ಹರಿಸಿ, ಹಾಸ್ಯ ರಸಾಯನಗಳಾಗಿವೆ. ನಮ್ಮ ಸುತ್ತ ಮುತ್ತಲಿನ ವಸ್ತುವನ್ನು ಆಯ್ದುಕೊಂಡು ಪ್ರಬಂಧಗಳನ್ನು ಹುಟ್ಟು ಹಾಕಿದ್ದಾರೆ. ಆಶಯ ಕೆಲವು ಪ್ರಬಂಧಗಳು ಹಾಸ್ಯವೆಂದು ತಿಳಿದು ನಕ್ಕು ನಗಿಸಿ ಮಾಯಾವಾಗಬಹುದು. ಆದರೆ ಅವುಗಳಲ್ಲಿಯ ನೀತಿಯನ್ನು ಸಮಾಜವನ್ನು ತಿದ್ದಲಿಕ್ಕೆ ಬಳಸಿಕೊಳ್ಳಬಹುದಾಗಿದೆ.

ಹಗುರ ಬರಹಗಳು ಒಂದೇ ಉಸಿರಿನಲ್ಲಿ ಓದಿ ಮುಗಿಸಬಹುದಾದಷ್ಟು ಹಗುರವಾಗಿವೆ. ನಶಿಸುತ್ತಿರುವ ಮಾನವೀಯ ಮೌಲ್ಯಗಳಿಗೆ ಸಾಣಿ ಹಿಡಿಯುವುದು ಈ ಹಾಸ್ಯ ಪ್ರಬಂಧಗಳ ಮೂಲ ಉದ್ದೇಶವಾಗಿದೆ.

## ಅಧ್ಯಾಯ – ೪

## ಭಾಷೆ ಮತ್ತು ಶೈಲಿ

ಸಾಹಿತ್ಯ ಜೀವನದ ಪ್ರತಿಬಿಂಬ, ಗತಿಬಿಂಬ. ಒಬ್ಬ ಶ್ರೇಷ್ಠ ಸಾಹಿತಿ ಎನಿಸಿಕೊಳ್ಳಬೇಕಾದರೆ ಆತನಿಗೆ ಭಾಷೆಯನ್ನು ದುಡಿಸಿಕೊಳ್ಳುವ ಕಲೆ ಗೊತ್ತಿರಲೇಬೇಕು. ಭಾಷೆ ನಮ್ಮ ಮನಸ್ಸಿನಲ್ಲಿಯ ವಿಚಾರಗಳನ್ನು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ಸಂಪರ್ಕ ಸಾಧನವಾಗಿದೆ. ಕಾಲಕ್ಕೆ ಅನುಗುಣವಾಗಿ ಒಬ್ಬ ಕವಿ, ಕಥೆಗಾರ, ಕಾದಂಬರಿಕಾರ, ಪ್ರಬಂಧಕಾರ ಭಾಷೆಯನ್ನು ತನ್ನ ಸಾಹಿತ್ಯಕ್ಕೆ ತಕ್ಕಂತೆ ಬಳಸಿಕೊಂಡು, ತನ್ನ ಸುತ್ತಮುತ್ತಲಿನ ಪರಿಸರ, ಸನ್ನಿವೇಶ, ಘಟನೆ, ವ್ಯಕ್ತಿ, ವಸ್ತು ಕುರಿತು ಸಾಹಿತ್ಯ ರಚಿಸುತ್ತಾನೆ.

ನಮ್ಮ ಹಾಸ್ಯ ಪ್ರಬಂಧಕಾರರಾದ ಹಲಗಬಾಳಿಯವರು ಕೂಡ ಭಾಷೆಯನ್ನು ವಿಶಿಷ್ಟ ರೀತಿಯಲ್ಲಿ ಬಳಸಿಕೊಂಡಿದ್ದಾರೆ.

ಶ್ರೀ ಬಸು ಕೊಣ್ಣೂರ ಅವರ ಅಭಿಪ್ರಾಯದಂತೆ –

**‘ಆಡು ಭಾಷೆಯ ಗತ್ತು ತಿಳಿಹಾಸ್ಯದ ಗಮ್ಮತ್ತು**
**ತಿರುತಿರುಗಿ ಓದುವ ಹುಮ್ಮಸ್ಸು ಮೂಡಿಸುವ**
**ಟೊಂಯ್ ಟೊಂಯ್ ಮಾತಿನ ತಾಕತ್ತು’**[೧]

ಎಂಬ ಮಾತಿನಲ್ಲಿ ಅವರು ಬಳಸಿಕೊಂಡ ಭಾಷೆಯ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.

ಹುಲಗಬಾಳಿಯವರ ಪ್ರಥಮ ಹಾಸ್ಯ ಪ್ರಬಂಧಗಳಲ್ಲಿ ಪ್ರಾರಂಭದಲ್ಲಿ ದಕ್ಷಿಣ ಕರ್ನಾಟಕ ಭಾಷೆ ಬಳಕೆ ಆಗಿದೆ. ನಂತರ ಕೆಲವು ಪ್ರಬಂಧಗಳಲ್ಲಿ ಉತ್ತರ ಗಡಿಯ ಭಾಷೆ ಕಾಣಬಹುದಾಗಿದೆ. ಹುಲಗಬಾಳಿಯವರ ತಮ್ಮ ಏಳು ಹಾಸ್ಯ ಪ್ರಬಂಧ ಸಂಕಲನದಲ್ಲಿ ಬಳಸಿರುವ ಭಾಷೆ ಉತ್ತರಕರ್ನಾಟಕದ್ದು, ಆಡುಭಾಷೆಯಲ್ಲಿ ನವಿರಾದ ಹಾಸ್ಯ ಮೀಟುವ ಕಲೆ ಅವರಿಗೆ ಕರಗತವಾಗಿದೆ. ಶ್ರೀ ಅನಂತ ಕಲ್ಲೋಳ ಅವರ ಭಾಷೆ ಬಳಕೆ ಬಗ್ಗೆ ಈ ರೀತಿಯಾಗಿ ಅಭಿಪ್ರಾಯವ್ಯಕ್ತಪಡಿಸಿದ್ದಾರೆ.

‘ನೀವು ಭಾಷೆಯ ಮೇಲೆ ಸಾಧಿಸಿರುವ ಹಿಡಿತ ಮೆಚ್ಚುವಂಥದ್ದು’.

‘ಭಾಷೆ ಸಂಬಂಧಗಳಿಗೆ ಶಾಪವಾಗಕೂಡದು. ಅದು ಮಾನವ ಜೀವನಕ್ಕೆ ಪೂರಕವಾಗಬೇಕೆ ಹೊರತು ಮಾರಕವಾಗಬಾರದು. ಬಾಂಧವ್ಯದ ಬಳ್ಳಿ ಭಾಷೆಯ ಗಡಿದಾಟಿ ಚಿಗುರಬೇಕೆಂಬ ಆಶಯ ಲೇಖಕರದು. ನಾವಾಡುವ ಮಾತು ನಮ್ಮ ಸಂಸ್ಕಾರದ ಪ್ರತಿಬಿಂಬ, ಬಯಸಿದ ಮಾತ್ರಕ್ಕೆ ಒಳ್ಳೆಯ ಸಂಸ್ಕಾರ ಬರುವಂತಿಲ್ಲ. ತ್ಯಾಗ, ಸಂಯಮ, ಸದ್ವಿಚಾರ, ಸದಾಚಾರ–ಇವು ಸಂಸ್ಕಾರ ಬೆಳೆಸುವಲ್ಲಿ ಪೋಷಕ ದ್ರವ್ಯಗಳು’.[೨] ಹಾಸ್ಯದ ಪರಿಣಾಮಕ್ಕಾಗಿ ಹುಲಗಬಾಳಿಯವರು ವೈಶಿಷ್ಟ ಪೂರ್ಣವಾಗಿ

೧. ‘ಉದರೋಪನಿಷತ್’ – ಮಲ್ಲಿಕಾರ್ಜುನ ಹುಲಗಬಾಳಿ. ಪು.ಸಂ. – ೮೨

೨. ‘ಬ.ಗಿ.ಯಲ್ಲಟ್ಟಿ : ಸಮಗ್ರ ಅಧ್ಯಯನ’ – ಆರ್. ಬಿ. ಚಿಲಮಿ. ಪು.ಸಂ. – ೧೬೨

ಬಳಸಿಕೊಂಡಿದ್ದಾರೆ. ಅವರ ಆತ್ಮೀಯ ಶೈಲಿಯಲ್ಲಿ ನಗೆಯೇ ಉಕ್ಕಿ ಹರಿದಿದೆ.

ಉತ್ತರ ಕರ್ನಾಟಕದ ಭಾಷಾ ಮೋಡಿ ಇಲ್ಲಿದೆ. ದೇಶಿಯ ಭಾಷೆಯ ಸೊಗಡು ಅಲ್ಲಿದೆ. ಗಾದೆ ಮಾತು, ನುಡಿಗಟ್ಟು ವಚನಗಳನ್ನು ತಮ್ಮ ಹಾಸ್ಯ ಬರಹಗಳಲ್ಲಿ ಬಳಸಿಕೊಂಡು ಜನಸಾಮಾನ್ಯರಿಗೆ ಓದುವ ಕುತೂಹಲ, ಉಂಟುಮಾಡಿವೆ.

ಹಾಸ್ಯದ ಜೊತೆಗೆ ಪ್ರಾದೇಶಿಕತೆಯ ಸೊಗಡು ಅಲ್ಲದೆ ಹಾಸ್ಯದ ಪರಿಣಾಮಕ್ಕಾಗಿ ಹುಲಗಬಾಳಿಯವರು ಭಾಷೆಯನ್ನು ದುಡಿಸಿಕೊಳ್ಳುವ ರೀತಿ ಕೂಡ ವಿಶಿಷ್ಟವಾಗಿದೆ. ಅವರು ಎಲ್ಲ ಬಗೆಯ ಕನ್ನಡವನ್ನು ಬರೆಯಬಲ್ಲರು. ಇಲ್ಲಿ ಬರುವ ಸರಸು ಮತ್ತು ವಿಠ್ಠೂರಂಥ ವ್ಯಕ್ತಿಗಳು ಕೂಡ ಹುಲಗಬಾಳಿಯವರ ಮಾತನ್ನೇ ಕಲಿತುಕೊಂಡಿದ್ದಾರೆ. ದೇಶಿಯ ದನಿ ಕೂಡ ನಮಗೆ ಕಚಗುಳಿ ಉಂಟುಮಾಡುತ್ತದೆ. ಇದಕ್ಕೆ ಪೂರಕವಾಗಿ ಹುಲಗಬಾಳಿಯವರ ಶೈಲಿಯಲ್ಲಿ ಹುದುಗಿರುವ 'ನಾಟಕೀಯ ಗುಣ' ಅವರ ಬರಹದ ಸೊಗಸನ್ನು ಬಿಂಬಿಸುತ್ತದೆ. ತುಂಡು-ತುಂಡು ಸಂಭಾಷಣೆಗಳ ಮೂಲಕ ಅವರು ಹಾಸ್ಯ ಸಂದರ್ಭಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಇಲ್ಲಿಯ ಬರಹಗಳು ತುಂಬ ವಿಡಂಬನೆ, ಉತ್ಪ್ರೇಕ್ಷೆ, ಗೇಲಿ, ಅಣಕಗಳು ಇಣಕಿ ಹಾಕಿದರೆ, ವ್ಯಂಗ್ಯದ ಜೊತೆಗೂಡಿ ಕಟಕಿ, ಕೀಟಲೆ ಲಘುಮಾತು, ಕುಚೋದ್ಯಗಳು ಆಟವಾಡುತ್ತವೆ. ಹಾಸ್ಯದ ಎಲ್ಲ ಮಗ್ಗುಲಗಳನ್ನು ತೆರೆದು ತೋರಿಸಲು ಈ ಸಾಮಗ್ರಿಗಳು ಇಲ್ಲಿ ಅನುಕೂಲಕರವಾಗಿದೆ.

ಸಾಹಿತ್ಯದ ಪ್ರಾಧ್ಯಾಪಕರಾದ ಹುಲಗಬಾಳಿಯವರ ಬರಹಗಳಲ್ಲಿ ಕನ್ನಡದ ನುಡಿಗಳು, ಗಾದೆ ಬಳಕೆ ಹಿತಮಿತವಾದದ್ದು, ಉದಾ : 'ಅವರಸಕ್ಕೆ ಅಜ್ಜಿ ಮೈ ನೆರೆತಳಂತೆ', ಗಾದೆ. 'ಬಾರದು ಒಪ್ಪದು, ಬಪ್ಪದು ತಪ್ಪದು'. (ವಚನ)

ಇವು ಏಕಾಂತ ಪ್ರಹಸನಗಳಂತಿವೆ. ಯಾರನ್ನು ಚುಚ್ಚಿ ನೋಯಿಸುವ ಹಠ ಇವರ ಲೇಖನಿಗಿಲ್ಲ. ಆದರೆ ಲೇಖಕರು ಸ್ವತಃ ಶಿಕ್ಷಣ ಕ್ಷೇತ್ರದಲ್ಲಿ ಏಗಿದವರು, ಮಾಗಿದವರು. ಅವರ ವಿಡಂಬನೆಗೆ 'ಅಂಗ್ರೇಜಿ ಭೂತವೂ, ವಿಕ್ರಮನ ಭೇತಾಳವು...' ಲೇಖನವೊಂದೇ ಸಾಕು.

ಶೈಲಿ :

ಇಂಗ್ಲೀಷನ 'Style' ಪದದ ಸಂವಾದಿ ಪದ ಶೈಲಿ; ನಮ್ಮಲ್ಲಿ ಪಂಪನಿಂದ ಕುವೆಂಪುವರೆಗೆ ಪದ್ಯಗಳಲ್ಲಿ ವಿವಿಧ ರೀತಿ ಶೈಲಿಯನ್ನು ಅಳವಡಿಸಿಕೊಂಡು ಬಂದಿದ್ದಾರೆ. ಶೈಲಿ ಎಂದರೆ ಬರೆಯುವ ರೀತಿ. ನಮ್ಮ ಹಾಸ್ಯ ಲೇಖಕರಾದ ಹುಲಗಬಾಳಿಯವರು ಹಾಸ್ಯದ ಜೊತೆಗೆ ಅಣಕು, ವಿಡಂಬನೆ, ವ್ಯಂಗ್ಯ, ಚತುರೋಕ್ತಿಗಳನ್ನು ಬಳಸಿಕೊಂಡಿದ್ದಾರೆ.

ಹಾಸ್ಯಕವಿ ಜನರನ್ನು ಸಂತೋಷಗೊಳಿಸುವುದಕ್ಕಾಗಿ ನಗಿಸುವನು. ನಗೆ ಆನಂದಕ್ಕಾಗಿ, ಸಂತೋಷಕ್ಕಾಗಿ ಇದ್ದರೂ, ಅದು ಸಮಾಜದ ಸ್ವಾಸ್ಥ್ಯವನ್ನು ಕಾಯುವುದು.

'ಶೈಲಿ ಎನ್ನುವುದು ಒಂದೇ ಆದರೂ ಅದಕ್ಕೆ ಹಲವು ಮುಖಗಳು. ವಾದಕ್ಕೆ ಚುರುಕು ಶೈಲಿ,

ಭಾಷಣಕ್ಕೆ ತಿಳಿ ಶೈಲಿ, ವಿಮರ್ಶೆಗೆ ಪಾಂಡಿತ್ಯ ಶೈಲಿ, ಹರಟೆಗೆ ಹಾಸ್ಯ ಶೈಲಿ, ಕಾವ್ಯಕ್ಕೆ ಪುರಾಣ ಶೈಲಿ, ಪತ್ರಿಕೆಗೆ ಲಘು ಶೈಲಿ ಇರಬೇಕಾಗುತ್ತದೆ.[೩]

ಒಬ್ಬೊಬ್ಬ ಲೇಖಕರಿಗೆ ಒಂದೊಂದು ಶೈಲಿ ಇರುವುದುಂಟು. ವಿಷಯ ಬದಲಿಯಾದರೆ ಸಾಕು, ಶೈಲಿ ಬದಲಾಗುತ್ತದೆ. ಆಧುನಿಕ ಕನ್ನಡ ಗದ್ಯ ಶೈಲಿ ವಿಭಿನ್ನವಾದದ್ದು, ಅದೊಂದು ಹೊಸ ಶೈಲಿ.

ಹಾಸ್ಯ ಕವಿ/ಲೇಖಕ ಹಾಸ್ಯ ಪ್ರಬಂಧ ಮೂಲಕ ನಮ್ಮನ್ನು ನಗಿಸುತ್ತಾನೆ, ಅಳಿಸುತ್ತಾನೆ, ಅಂಜಿಸುತ್ತಾನೆ. ನೀತಿಬೋಧೆ ಮಾಡಿದ್ದಾನೆ. ನಗೆ ಬೆಳದಿಂಗಳು, ಎಲ್ಲರ ಮನಸ್ಸನ್ನು ಹಾಸ್ಯದಲ್ಲಿ ದೂಡುತ್ತದೆ ಹಾಸ್ಯ ಲೇಖಕನ ನಿರೂಪಣಾ ಶೈಲಿ ವಿಶಿಷ್ಟವಾಗಿರಬೇಕು.

ಮನುಷ್ಯನ ಬದುಕಿನಲ್ಲಿ ಸುಖವೊಂದೇ ಶಾಶ್ವತವಲ್ಲ. ಸುಖವನ್ನು ಹಿಂಬಾಲಿಸಿಕೊಂಡು ದುಃಖದ ಕರಿನೆರಳು ಇರುತ್ತದೆ. ದುಃಖದಾ ಒಡಲಲ್ಲಿ ಸುಖದ ರಜತರೇಖೆ ಕಾಣುತ್ತದೆ.

ಯಾವ ಸತ್ಯವನ್ನಾದರೂ ಅದೆಷ್ಟೇ ಕಟುವಾಗಿರಲಿ, ಕಠಿಣವಾಗಿರಲಿ, ಮನಸ್ಸಿಗೆ ಹೋಗಿಸುವ ಶಕ್ತಿ ಇರುವುದು ಹಾಸ್ಯಕ್ಕೆ ಮಾತ್ರ.

ನವರಸಗಳಲ್ಲಿ ಉಳಿದೆಲ್ಲ ರಸಗಳೂ ಎಲ್ಲ ಪ್ರಾಣಿಗಳಿಗೂ ದಕ್ಕಬಹುದು. ಆದರೆ ಹಾಸ್ಯರಸ ಮಾತ್ರ ಮಾನವರಿಗೆ ವಿಶಿಷ್ಟವಾದದ್ದು. ಸಿಂಹದ–ವೀರ, ಹುಲಿಯ ರೌದ್ರ ಕರಡಿಯ ಭೀಬತ್ಸ, ಕೋಗಿಲೆಯ ಶೃಂಗಾರ, ಈ ರೀತಿಯಾಗಿ ಉಳಿದೆಲ್ಲ ರಸಗಳನ್ನು ಪ್ರಾಣಿಗಳು ಅಭಿವ್ಯಕ್ತಿಸುವುದನ್ನು ನಾವು ಕಾಣಬಹುದು. ಆದರೆ ಯಾವುದೇ ಪ್ರಾಣಿ ನಕ್ಕಿದ್ದನ್ನು ಕಂಡಿಲ್ಲ. ಅವು ಸಂತೋಷ, ನೆಮ್ಮದಿಯಾಗಿರಬಹುದು. ಆದರೆ ಮನುಷ್ಯನ ಹಾಗೆ ಹಾಸ್ಯ ಸನ್ನಿವೇಶ ಕಲ್ಪಿಸಿಕೊಂಡು ಅಥವಾ ನೆನೆಸಿಕೊಂಡು ನಗಲಾರವು. ಮನುಷ್ಯ ಪ್ರಾಣಿಗಳಿಗೆ ಇದೇ ವ್ಯತ್ಯಾಸ.

‘ಕಿರಿ ಆಳದ ನಗೆ ನೀರಿನ ಮೇಲೆ
ತಿರುಗಾಡುತ ಬಹು ವೇಳೆ
ಕಣ್ಣೀರಿನ ಕಡಲಿನ ಪಾಲು
ಹಾಸ್ಯದ ಹರಿಗೋಲು’[೪]

* * *

೩. ‘ಕನ್ನಡದಲ್ಲಿ ಹಾಸ್ಯ ಸಾಹಿತ್ಯ’ : ಡಾ॥ ಎಂ. ಎಸ್. ಸುಂಕಾಪುರ – ಪು.ಸಂ. – ೩೧೩

೪. ‘ನಗು’ – ಎಚ್ಚೆಸ್ಕೆ – ಪು.ಸಂ. – ೯೪

# ಅಧ್ಯಾಯ – ೬

## ಸಮಾರೋಪ

ಬದುಕು ಬಹು ಕಷ್ಟ ಹಾಸ್ಯಗಾರರಿಗೆ ।
ಅದಕೆ ಅನ್ನುವರವರ ಲೋಕ ವಿರೋಧಿ ॥
ಹದವರಿತು ಆಡಿವುದು ನೂರು ಶತ್ರುಗಳು
ಅದರ ಹಿಂದೆಯೇ ಸಾವಿರ ಮಿತ್ರರೋ ತಿಂಮ ॥[೧]

ಹಾಸ್ಯಗಾರ ಏನಾದರೂ ಹರಟೆ ಹೊಡೆದರೆ, 'ಹಾಳು ಹರಟೆ' ಎಂದು ತಾತ್ಸಾರ ಭಾವನೆವುಂಟು ಮಾಡುವರು. ಅದೇ ಆತನಿಗೆ ಯಾರಾದರೂ ಪ್ರಶಸ್ತಿಕೊಟ್ಟರೆ ಜನರು ಆತನ ಬೆಂಬಲಿಸುವರು.

'ಕನ್ನಡ ಕುಲವೇ ರಸಿಕಕುಲ. ಕನ್ನಡ ಸಾಹಿತ್ಯ ರಸಿಕರ ರಸಾಯನಃ'[೨] ಅದು ಮೊದಲಿನಿಂದಲೂ ಹಾಸ್ಯಪೂರ್ಣವಾಗಿ ಬೆಳೆಯುತ್ತಾ ಬಂದಿದೆಯೆಂಬುದಕ್ಕೆ ನಾವು ಇಲ್ಲಿಯ ವರೆಗೆ ನಡೆಸಿದ ಸಾಹಿತ್ಯ ವಿಮರ್ಶೆ ಮತ್ತು ಹಾಸ್ಯ ವಿವೇಚನೆಯೇ ನಿದರ್ಶನವಾಗಿದೆ.

ಪ್ರಬಂಧಕಾರ ಹಾಸ್ಯದರ್ಶನ ಮತ್ತು ಹಾಸ್ಯ ನಿರೂಪಣಾ ಚತುರೋಕ್ತಿಗಳನ್ನು ಬಳಸುವ ರೀತಿ ವಿಶಿಷ್ಟವಾಗಿದೆ. ಹಾಸ್ಯ ಸಾಹಿತಿಗಳು ಸಿಗುವುದು ವಿರಳ. ಸಿಕ್ಕರೂ ಕೂಡ ಅವರ ಸಾಹಿತ್ಯ ಪ್ರಕಟಣೆ ಪತ್ರಿಕೆ, ವಾರ, ಮಾಸ ಪತ್ರಿಕೆಗಳ ಅವಶ್ಯಕತೆಯಿದೆ.

ಸಾಹಿತ್ಯ ಸೃಷ್ಟಿ ಚಟಕ್ಕಿರಬಹುದು, ಹಟಕ್ಕಿರಬಾರದು. ಆದರೆ ತನ್ಮೂಲಕ ಸಮಾಜವನ್ನು ತಿದ್ದುವ ಕಾರ್ಯ ನಡೆಯಬೇಕು ಎಂಬ ಉತ್ಕೃಷ್ಟ ಆಶಯ ಸಾಹಿತಿಗೆ ಇರಬೇಕು.

ಇಲ್ಲಿಯವರೆಗೆ ಹುಲಗಬಾಳಿಯವರ ಹಾಸ್ಯ ಪ್ರಬಂಧಗಳು ಕುರಿತು ಅಧ್ಯಯನ ಕೈಕೊಳ್ಳಲಾಗಿ, ಅವರ ಪ್ರಬಂಧಗಳ ಸ್ವರೂಪದ ವಿವೇಚನೆ ಜೊತೆಗೆ ವಿಮರ್ಶೆ ಮಾಡಲಾಗಿದೆ. ಅವರು ಬಳಸಿಕೊಂಡ ಉತ್ತರ ಕರ್ನಾಟಕದ ಭಾಷೆ. ಆಗಾಗ ಮಿಂಚಿನಂತೆ ಬಂದು ಹೋಗುವ ಇಂಗ್ಲೀಷ ಪದಗಳು ಅವರು ವೃತ್ತಿಯಿಂದ ಇಂಗ್ಲೀಷ ಪ್ರಾಧ್ಯಾಪಕರು ಪ್ರವೃತ್ತಿಯಿಂದ ಹಾಸ್ಯ ಸಾಹಿತಿಗಳು, ಅಂಕಣಕಾರರು, ಜೀವನಚರಿತ್ರೆಕಾರರು ಆಗಿದ್ದಾರೆ. ಅವರ ಒಟ್ಟು ಏಳು ಹಾಸ್ಯ ಪ್ರಬಂಧಗಳನ್ನು ಅಧ್ಯಯನಕ್ಕೈಕೊಳ್ಳಲಾಗಿ ಅವು ಹಾಸ್ಯ ಸಾಹಿತ್ಯದ ಸಾಲಿಗೆ ಸೇರತಕ್ಕವುಗಳಾಗಿವೆ. ಅವರ ಪ್ರಾರಂಭಿಕ ಹಾಸ್ಯ ಪ್ರಬಂಧಗಳು ಅವರ ಸುತ್ತಮುತ್ತಲಿನ ಸನ್ನಿವೇಶ, ಘಟನೆ ಕುರಿತಾಗಿದ್ದು. ನಂತರ ಬಂದ ಹಾಸ್ಯ ಪ್ರಬಂಧಗಳು ಅವರ ವೃತ್ತಿ ಜೀವನದಲ್ಲಿ ಆಗಾಗ ಬಂದು ಹೋಗುವ ಘಟನೆ, ಸನ್ನಿವೇಶ, ಸ್ಥಳದ ಬಗ್ಗೆ ರಚಿಸಿದ್ದಾರೆ.

---

೧. ಅಂದನಾ ತಿಂಮ – ಬೀಚಿ – ಪುಟ ೪೨೩

೨. ಕನ್ನಡ ಸಾಹಿತ್ಯದಲ್ಲಿ ಹಾಸ್ಯ – ಡಾ|| ಎಂ. ಎಸ್. ಸುಂಕಾಪುರ ಪುಟ ೭೩೬

ಚಪ್ಪಾ ಚರಿಷ್ಮಾದಲ್ಲಿಯ ಕೆಲವೊಂದು ಹಾಸ್ಯ ಬರಹಗಳು 'ಅನುಕೂಲಕ್ಕೊಂದು ಅವತಾರ'ದಲ್ಲಿ ಸ್ಥಾನಗಿಟ್ಟಿಸಿಕೊಂಡಿವೆ. ಅವರ ಏಳನೆಯ ಪ್ರಬಂಧದಲ್ಲಿ 'ಕಲ್ಲರಳಿ ಹೂವಾಗಿ' ಪ್ರಬಂಧ ಸುಣ್ಣದ ಬಗ್ಗೆ ತಿಳಿಸಿದರೆ. ಇನ್ನೊಂದು 'ಕಲ್ಲರಳಿ ಹೂವಾಗಿ' ವಿವಿಧ ಲೇಖಕರ ಕವಿಗಳ ಹಿನ್ನಲೆಯಲ್ಲಿ 'ಹೂಗಳ ಬಗ್ಗೆ ವಿವೇಚಿಸಲಾಗಿದೆ. ಇದು 'ನಾಲಿಗೆಯ ಮೇಲೊಂದಿಷ್ಟು' ಪ್ರಬಂಧ ಸಂಕಲನದ ಹಾಸ್ಯ ಬರಹವಾಗಿದೆ.

ಲೇಖಕರು ಭಾಷೆಯನ್ನು ಹಾಸ್ಯಮಯವಾಗಿ, ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಶೈಲಿಯು – ಭಾರತೀಯರ ದೇಶಿಯ ಶೈಲಿ, ಹಾಗೂ ಪಾಶ್ಚಾತ್ಯರ ಇಂಗ್ಲೀಷ ಶಿಕ್ಷಣದ ಪ್ರಭಾವ ಸಾಕಷ್ಟಾಗಿದೆ.

೦ ಲೇಖಕರು 'ಸರಸು' ಪಾತ್ರದ ಬದಲಾಗಿ ಇನ್ನೊಂದು ಪಾತ್ರ ಚಿತ್ರಣ ಮಾಡಬಹುದಾಗಿತ್ತು. ವಿಠ್ಠೊ ಗೆಳೆಯನಾಗಿ, ಶಿಷ್ಯನಾಗಿ, ಹೆಂಡತಿ ತಮ್ಮ (ಸಾಲಾ) ಆಗಿ ರೂಪ ಪರಿವರ್ತನೆ ಪಡೆದುಕೊಂಡಿದ್ದಾನೆ. 'ಸರಸು' ಒಮ್ಮೆ ಪೂಲನ್ ಆಗಿ, ಮಗದೊಮ್ಮೆ ಹಿಡಿಂಬಿ ಆಗಿ ಲೇಖಕರು ಚಿತ್ರಿಸಿದ್ದಾರೆ. ಅವರ ಭಾಷೆ ಬಳಕೆ ಶೈಲಿ ನಿರೂಪಣೆಯಿಂದ ಅವರ ಪತ್ನಿ ಇವರ ಮಧ್ಯ ಸಾಮರಸ್ಯ ಜೀವನವಿರುವುದು ಕಂಡು ಬರುತ್ತದೆ. ಲೇಖಕರಿಗೆ ಎಷ್ಟೋ ಪ್ರಶ್ನೆಗೆ ಉತ್ತರ ಬಾರದವನ್ನು ಹೆಂಡತಿ (ಸರಸು)ಯಿಂದ ಸಾಲ್ವ ಮಾಡಲಾಗಿದೆ (ಪರಿಹರಿಸು).

ಲೇಖಕರ 'ವಿಠ್ಠೊ', ಬೀಚಿಯವರ ಪಾತ್ರದಂತೆ ವಿಶಿಷ್ಟತೆ ಪಡೆದುಕೊಂಡಿದೆ. 'ಸರಸು' ಸ್ತ್ರೀಕುಲದ ಪ್ರತೀಕದಂತಿದ್ದಾಳೆ. ಹುಲಗಬಾಳಿಯವರ ಹಾಸ್ಯ ಸಾಹಿತ್ಯ ರಚನೆಗೆ ಅವರ ಹಾಸ್ಯ ಪ್ರವೃತ್ತಿ ಹಾಗೂ ಹಾಸ್ಯ ಸಾಹಿತ್ಯದ ಕಡೆಗೆ ಒಲವು ಜಾಸ್ತಿ.

ಹುಲಗಬಾಳಿಯವರ ಈ ಏಳು ಹಾಸ್ಯ ಪ್ರಬಂಧಗಳು ವಿವಿಧ ತೆರನಾದ ಸಾಹಿತ್ಯದ ವಸ್ತುಗಳನ್ನು ಒಳಗೊಂಡಿವೆ. ಕೆಲವು ಪ್ರಬಂಧಗಳು ಸಮಾಜವನ್ನು ತಿದ್ದುವ ಗುರಿಯನ್ನು ಇಟ್ಟುಕೊಂಡಿದ್ದರಿಂದ ಅವು ಸಮಾಜಕ್ಕೆ ಮುನ್ನುಡಿಗಳಂತಿವೆ. ಇನ್ನೂ ಕೆಲವು ಪ್ರಬಂಧಗಳು ವಿಡಂಬನೆಯಿಂದ ಕೂಡಿವೆ. ಅವು ಸಮಾಜದ ಸಾಮಾನ್ಯ ಜನರನ್ನು ಹಾಸ್ಯಕ್ಕೆ ಗುರಿ ಮಾಡಿ ಇನ್ನುಳಿದವರಿಗೆ ಪಾಠಗಳಂತಿವೆ.

ಹಲವು ಪ್ರಬಂಧಗಳು ಪ್ರವಾಸ ಕಥನದಂತಿವೆ. ಉದಾ : 'ಕಾಶೀಯಾತ್ರೆ', ಇನ್ನು ಕೆಲವು ಆತ್ಮಕಥನದಂತಿವೆ. ಉದಾ : 'ಅಪ್ಪ–ನನ್ನಪ್ಪ', ಹಲವು ಆರೋಗ್ಯ ಮಂತ್ರಗಳಂತೆ ವಿಶಿಷ್ಟ ಸ್ಥಾನಪಡೆದಿವೆ. ಉದಾ : 'ಮೂತ್ರಾಲೋಚನೆ' ಮತ್ತು 'ಪಿತ್ತಾಸುರ' ಉಳಿದವು ದಿನನಿತ್ಯ ನಡೆಯುವ ವಸ್ತು, ಘಟನೆ, ಕುರಿತಾಗಿದೆ. ಅತಿಕನಿಷ್ಠ ವಸ್ತುಗಳಾದ 'ಸುಣ್ಣ', 'ಗೇಟು', 'ಬೋಜನವಾದ' ಇವುಗಳನ್ನು ಹೆಸರಿಸಬಹುದಾಗಿದೆ. ಶೈಲಿ ಬಗ್ಗೆ ಹೇಳುದಾದರೆ ಉತ್ತರ ಕರ್ನಾಟಕದ ಭಾಷೆಯ ಬಳಕೆಯಿಂದ ಪದಗಳ ಜೊತೆಗೆ ಆಟವಾಡಬಲ್ಲ ಭಾಷಾಶೈಲಿ ಗಮನ ಸೆಳೆಯುತ್ತದೆ. ನಮ್ಮ ಜನಗಳ ನಡುವೆ ಸಿಕ್ಕುವ ಮತ್ತು ಎಲ್ಲ ತಿಕ್ಕಲುತನಗಳ ರೂಪವನ್ನು ಇಲ್ಲಿ ಕಾಣಬಹುದು. ಇವರು ಭಾಷೆಯನ್ನು ಬಲು ಪಸಂದಾಗಿ ಬಳಸಿಕೊಂಡಿರುವರು. ದೇಶೀಯ ಸೊಗಡು ಇಲ್ಲದೆ. ಆಗಾಗ ಗದ್ಯದಲ್ಲಿ ಗಾದೆಮಾತು, ವಚನ, ಪದ್ಯಗಳನ್ನು ಬಳಸಿಕೊಂಡಿದ್ದಾರೆ.

ಇವರ ಹಾಸ್ಯ ಸಂಕಲನಗಳಲ್ಲಿ ಅನೇಕ ಹೊಸ, ಹೊಸ ಪದಗಳು ಪಾದಾರ್ಪಣೆ ಪಡೆದಿವೆ. ಅವು ಲೇಖನಕ್ಕೊಂದು ಆಕಾರಕೊಡುವುದರ ಜೊತೆಗೆ ಸೊಗಸು ನೀಡಿವೆ. ಓದುಗರಿಗೆ ಅಥವಾ ವಿಮರ್ಶಕರಿಗೆ ಅಚ್ಚರಿಯ ಸಂತಸ ತರುವಂಥಾ ಪದಗಳು 'ಮಹಿಷೋಪಾಸಕ', ಹಿನೋಪಚಾರ, ಅಮೂತ್ರರು, ಸುಣ್ಣ ಮೇವ ಜಯತೆ, ಮೂತ್ರಾಲೋಚನೆ, ಬಹುಮೂತ್ರಿಗಳು, ಮುಕ್ತಮೂತ್ರಿ, ಪಿತ್ತೇಶ್ವರ, ಜಠರ ಗಂಗೋತ್ರಿ, ಪಿತ್ತಾಗಮನ, ಭೋಜನಾಂಪ್ರಿಯ, ಪರಾನ್ನಪುಷ್ಪ ಮೋಹಾತ್ಮ... ಇತ್ಯಾದಿ ಇತ್ಯಾದಿ. ಪ್ರಬಂಧಗಳ ವಸ್ತು ಸಾಮಾನ್ಯವಾಗಿದ್ದರೂ ಅಸಾಮಾನ್ಯ ಅರ್ಥವನ್ನು ಅವು ಸೂಚಿಸುತ್ತವೆ. ಲೇಖಕರು ಕನ್ನಡ ಸಾಹಿತ್ಯದ ಎಲ್ಲ ಹಾಸ್ಯ ಸಾಹಿತಿಗಳ ಎಲ್ಲ ಪ್ರಕಾರದ ಸಾಹಿತ್ಯವನ್ನು ಅಂದರೆ 'ಚುಟುಕು', 'ನಗೆಹನಿ' 'ಪ್ರಬಂಧ'ಗಳನ್ನು ಹಾಗೂ ಭರತಾದಿಗಳ ಸಾಹಿತ್ಯವನ್ನು ಅಧ್ಯಯನ ಕೈಕೊಂಡಿದ್ದಾರೆ ಎಂಬುದನ್ನು ಅವರ ಈ ಏಳು ಹಾಸ್ಯ ಸಂಕಲನಗಳನ್ನು ಅಧ್ಯಯನ ಮಾಡಿದಾಗ ತಿಳಿದು ಬರುತ್ತದೆ.

ಹಾಸ್ಯ ನಮ್ಮ ಸಾಹಿತ್ಯದಲ್ಲಿ ಎಡೆ ಪಡೆದು (ಸ್ಥಾನ)ಕೊಳ್ಳುವುದಕ್ಕಿಂತ ಮೊದಲು ಅರಸರ ಆ ಸ್ಥಾನದಲ್ಲಿ ವಿದೂಷಕರ ರೂಪದಲ್ಲಿ ಹಾಸ್ಯಗಾರರು ಜನರನ್ನು ನಗೆ, ಹಾಸ್ಯದ ಮೂಲಕ ಮನರಂಜನೆಗೊಳಿಸುತ್ತಿದ್ದರು. ಹಾಸ್ಯ ಪ್ರಾಚೀನ ಕಾಲದಿಂದ ಆಧುನಿಕವರೆಗೆ, ರಾಜಮಹಾರಾಜರಿಂದ ಹಿಡಿದು ಇವತ್ತಿನ ಜನಸಾಮಾನ್ಯರವರೆಗೆ ಅತಿವಶ್ಯಕವಾಗಿದೆ.

ನಮ್ಮ ವಿವಿಧ ಹಾಸ್ಯ ಸಾಹಿತಿಗಳು ತಮ್ಮ ನಾಟಕ, ಚುಟುಕು, ಕಾವ್ಯ, ಕವನ, ಪ್ರಬಂಧಗಳಿಂಧ ಕನ್ನಡ ಸಾಹಿತ್ಯಲೋಕಕ್ಕೆ ವಿಶಿಷ್ಟವಾದ ಕಾಣಿಕೆ ನೀಡಿದ್ದಾರೆ.

ನಮ್ಮ ಹಾಸ್ಯ ಪ್ರಬಂಧಕಾರರಾದ ಹುಲಗಬಾಳಿಯವರು ತಮ್ಮ ಹಾಸ್ಯ ಬರಹಗಳಿಂಧ ಪುರಸ್ಕಾರ ಪಡೆದಿದ್ದಾರೆ. ಅವರ ನೂರುಕ್ಕು ಹೆಚ್ಚು ಹಾಸ್ಯ ಪ್ರಬಂಧಗಳು ಓದಿಸಿಕೊಂಡು ಹೋಗುವ ಶೈಲಿಯಲ್ಲಿವೆ. ಅವರು ಆಡುಭಾಷೆಯಲ್ಲಿಯೇ ನವಿರಾದ ಹಾಸ್ಯ ಮೀಟುತ್ತಾರೆ. ಹುಲಗಬಾಳಿಯವರ ಹಾಸ್ಯ ಪ್ರಬಂಧಗಳನ್ನು ವಸ್ತು, ಆಶಯ, ಭಾಷೆ, ಶೈಲಿ ಕುರಿತು ಅಧ್ಯಯನಕ್ಕೊಳಪಡಿಸಿದಾಗ ಅವುಗಳ ಪೂರ್ಣಸ್ವರೂಪವು ಕಂಡು ಬರುವುದು. ಅವರು ಇಂಗ್ಲೀಷ ಪ್ರಾಧ್ಯಾಪಕರಾಗಿದ್ದರಿಂದ ಇಂಗ್ಲೀಷ 'ಪ್ರಬಂಧಗಳ' ಪ್ರಭಾವ ಇವರ ಹಾಸ್ಯ ಲೇಖನಗಳ ಮೇಲೆ ಉಂಟಾಗಿದೆ. ಇವರ ಎಲ್ಲ ಬರಹಗಳು ದಣಿದ ಹೃದಯಕ್ಕೆ, ಭಾರವಾದ ಮನಸ್ಸಿಗೆ ತಂಪನ್ನು ಹಾಗೂ ಆನಂದವನ್ನು ನೀಡುವುದರಲ್ಲಿ ಯಶಸ್ವಿಯಾಗಿದೆ.

* * *

## : ಮಲ್ಲಿಕಾರ್ಜುನ ಹುಲಗಬಾಳಿಯವರಿಗೆ ದೊರೆತ ಪುರಸ್ಕಾರಗಳು :

### : ಪುರಸ್ಕಾರಗಳು :

೧) 'ಅಕ್ಷಯ ಸಾಹಿತ್ಯ ಸ್ಪರ್ಧೆ' (ಮುಂಬೈ)ದಲ್ಲಿ ೧೯೯೭ ರಿಂದ ೨೦೦೦ ದವರೆಗೆ ಹಾಸ್ಯಲೇಖನದಲ್ಲಿ ಸತತ ನಾಲ್ಕು ಸಲ ಬಹುಮಾನ ದೊರೆತಿದೆ.

೨) 'ಕೇಫ್ ಸ್ಮಾರಕ ಸಾಹಿತ್ಯ ಸ್ಪರ್ಧೆ' (ಚೆನ್ನೈ) ದ್ವಿತೀಯ ಬಹುಮಾನ (೧೯೯೯) ೨೦೦೪ ರಲ್ಲಿ ಪ್ರಥಮ ಬಹುಮಾನ, ೨೦೦೮ ರಲ್ಲಿ ಪ್ರಥಮ ಬಹುಮಾನ ದೊರೆತಿದೆ.

೩) ಮುಂಬೈನ ಕರ್ನಾಟಕ ಸಂಘ (ಡೊಂಬಿವಲಿ) ಸಾಹಿತ್ಯ ಸ್ಪರ್ಧೆಯಲಿ ಪ್ರಥಮ ಬಹುಮಾನ (೨೦೦೧) ದೊರೆತಿದೆ.

೪) ಬೆಂಗಳೂರಿನ 'ಬೀಚಿ ವಿದ್ಯಾಕೇಂದ್ರ ಟ್ರಸ್ಟ್'ನ ವತಿಯಿಂದ 'ಬೀಚಿ ಸಾಹಿತ್ಯ ಪ್ರಶಸ್ತಿ' (೨೦೦೧) ದೊರೆತಿದೆ.

* * *

# ಅನುಬಂಧಗಳು

## ಅನುಬಂಧ - ೧ : ಮಲ್ಲಿಕಾರ್ಜುನ ಹುಲಗಬಾಳಿಯವರ ಕೃತಿಗಳು

| ಅ.ನಂ | ಗ್ರಂಥದ ಹೆಸರು | ಪ್ರಕಾಶನ | ಪ್ರಕಟಣೆ ವರ್ಷ |
|---|---|---|---|
| ೧ | ಟೊಂಯ್ ಟೊಂಯ್ ಮಾತು | ಸ್ನೇಹ ಪ್ರಕಾಶನ, ಬನಹಟ್ಟಿ. | ೧೯೯೪ |
| ೨ | ಉದರೋಪನಿಷತ್ | ವಿಮೋಚನಾ ಪ್ರಕಾಶನ, ಅಥಣಿ. | ೧೯೯೬ |
| ೩ | ಗುಡ್ ಬೈ ಬಿಜಾಪುರ | ನಂದ ಪ್ರಕಾಶನ, ಬನಹಟ್ಟಿ. | ೧೯೯೮ |
| ೪ | ಚಷ್ಮಾ ಚರಿಷ್ಮಾ | ೬೮ ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ ಸ್ವಾಗತ ಸಮಿತಿ ಪ್ರಕಟಿಸಿದೆ. | ೨೦೦೦ |
| ೫ | ನಾಲಿಗೆಯ ಮೇಲೊಂದಿಷ್ಟು | ನಂದ ಪ್ರಕಾಶನ, ಬನಹಟ್ಟಿ. | ೨೦೦೨ |
| ೬ | ಪರಂಜ್ಯೋತಿ (ಜೀವನಚರಿತ್ರೆ) | ೬೮ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ ಸ್ವಾಗತ ಸಮಿತಿ ಪ್ರಕಟಿಸಿದೆ. | ೨೦೦೨ |
| ೭ | ಅನುಕೂಲಕ್ಕೊಂದು ಅವತಾರ | ನಂದ ಪ್ರಕಾಶನ ಬನಹಟ್ಟಿ. | ೨೦೦೫ |
| ೮ | ತೆನಾಲಿ ರಾಮಕೃಷ್ಣ ಕಥೆಗಳು (ವಸಂತ ಬಾಲಸಾಹಿತ್ಯ ಮಾಲೆ-೧೨) | ವಸಂತ ಪ್ರಕಾಶನ, ಬೆಂಗಳೂರು. | ೨೦೦೮ |
| ೯ | ಅಕ್ಬರ್-ಬೀರಬಲ್ ಕಥೆಗಳು (ವಸಂತ ಬಾಲಸಾಹಿತ್ಯ ಮಾಲೆ-೮) | ವಸಂತ ಪ್ರಕಾಶನ, ಬೆಂಗಳೂರು. | ೨೦೦೮ |
| ೧೦ | ಜನರಲ್ ಬೋಗಿ | ನಂದ ಪ್ರಕಾಶನ, ಬನಹಟ್ಟಿ. | ೨೦೦೯ |

# ಪರಾಮರ್ಶನ ಗ್ರಂಥಗಳು

| ಅ.ನಂ | ಗ್ರಂಥದ ಹೆಸರು | ಲೇಖಕರು | ಪ್ರಕಟಣೆ ವರ್ಷ |
|---|---|---|---|
| ೧ | ಕನ್ನಡ ಸಾಹಿತ್ಯದಲ್ಲಿ ಹಾಸ್ಯ | ಡಾ. ಎಂ. ಎಸ್. ಸುಂಕಾಪುರ | ೧೯೬೦ (ಮಹಾಪ್ರಬಂಧ) |
| ೨ | ಪ್ರಬಂಧ ಪ್ರಪಂಚ ಡಾ. ರಾ.ಯ. ಧಾರವಾಡಕರ ಅಭಿನಂದನ ಗ್ರಂಥ | ಪ್ರಧಾನ ಸಂಪಾದಕರು ಶ್ರೀ ಎಚ್. ವಿ. ನಾಗೇಶ | ೧೯೯೦ |
| ೩ | ಸಮಗ್ರ ಲಲಿತ ಪ್ರಬಂಧಗಳು | ಶ್ರೀ ಎ. ಎನ್. ಮೂರ್ತಿರಾವ | ೧೯೮೮ |
| ೪ | ನಾನಿಕಾಕಾ : ಎನ್ನೆ ಬರಹ | ಸಂಪಾದಕರು ಸಿದ್ದಲಿಂಗ ಪಟ್ಟಣಶೆಟ್ಟಿ | ೧೯೮೩ |
| ೫ | ಸಂಸ್ಕೃತ ಸಾಹಿತ್ಯದಲ್ಲಿ ಹಾಸ್ಯ | ಉಪವಾಸ ಗ್ರಂಥ ಮಾಲೆ–೧೨೩ ಎಲ್. ಜಿ. ಜೋಶಿ | ೧೯೭೧ |
| ೬ | ಶತಮಾನದ ಲಲಿತ ಪ್ರಬಂಧಗಳು | ಗುರುಲಿಂಗ ಕಾಪಸೆ (ಸಂಪಾದಕರು) | ೨೦೦೧ |
| ೭ | 'ಹಾಸ್ಯ' | ಪ್ರೊ. ಎಸ್. ವಿ. ರಂಗಣ್ಣ | ೨೦೦೧ (ತೃತೀಯ ಮುದ್ರಣ) |
| ೮ | 'ಅಂದನಾ ತಿಂಮ' | ಬೀಚಿ | ೨೦೦೮ (ದ್ವಿತೀಯ ಮುದ್ರಣ) |
| ೯ | ಭಾರತೀಯ ಕಾವ್ಯಮೀಮಾಂಸೆ ಸಮಗ್ರ ವಿವೇಚನೆ | ಹ. ರಾ. ಕಿದಿಯೂರು | ೨೦೦೯ |
| ೧೦. | ಭಾರತೀಯ ಕಾವ್ಯಮೀಮಾಂಸೆ | ತಿ.ನಂ. ಶ್ರೀಕಂಠಯ್ಯ | ೧೯೯೦ (ಆರನೆಯ ಮುದ್ರಣ) |
| ೧೧ | ಬ. ಗಿ. ಯಲ್ಲಟ್ಟಿ : ಸಮಗ್ರ ಸಾಹಿತ್ಯ | ಡಾ. ಆರ್. ಬಿ. ಚಿಲಮಿ | ೨೦೦೭ |
| ೧೨ | ಹಾಸ್ಯದ ಹರಿಗೋಲು | ಜಿ. ಎಸ್. ವಡಾಗಾಂವಿ | ೨೦೦೭ |
| ೧೩ | ಪ್ರಬಂಧ ಸಂಪದ (೨೦೦೫–೦೬ ಸಾಲಿನ ಬಿ.ಎ. ಭಾಗ –೧) ಅವಶ್ಯಕ ಪಠ್ಯ | ಸಂಪಾದಕರು ಡಾ. ಆರ್. ಬಿ. ಚಿಲಮಿ ಪ್ರೊ. ಜಿ. ವ್ಹಿ. ಮಳಗಿ | ೨೦೦೫ |
| ೧೪ | 'ಮಂಕುತಿಮ್ಮನ ಕಗ್ಗ' | ಡಿ.ವ್ಹಿ.ಜಿ. | ೧೯೬೦ |

